

# ಕೆ.ವೆಂಕಟಪ್ಪ: ಸವಿ ನೆನಪು



ಕರ್ನಾಟಕ ಲಲಿತಕಲಾ ಅಕಾಡೆಮಿ

# ಕೆ.ವೆಂಕಟಪ್ಪ: ಸವಿ ನೆನಪು

ಅವರ

ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ

1987

ಸಂಪಾದಕ: ಎಸ್. ಎನ್. ಚಂದ್ರಶೇಖರ್




ಕರ್ನಾಟಕ ಲಲಿತಕಲಾ ಅಕಾಡೆಮಿ

ಬೆಂಗಳೂರು

**A Homage to K. Venkatappa:** Collection of articles to mark the birth centenary of the artist in 1987. published by the Karnataka Lalithakala Academy, 14/3, Canara Finance Corporation Building, Nrupathunga Road, Bangalore-2.

First Impression: 1987, 1500 copies

Eidted by: S. N. Chandrasekhar

Published by: B. C. Venkatappa, Registrar, Karnataka Lalithakala Academy,

Printed by: Brindavan Printers & Publishers (P) Ltd., Lalbagh Fort Road, Bangalore.

## ಎರಡು ಮಾತು

ಕಲಾವಿದರನ್ನು ರಸಋಷಿಗಳೆಂದು ಸಂಭೋದಿಸುವುದು ವಾಡಿಕೆ. ಅದರಲ್ಲೂ ಚಿತ್ರಕಲಾವಿದರು ತಪಸ್ವಿಗಳೆಂದೇ ಹಲವರ ನಂಬಿಕೆ. ಈ ನಂಬಿಕೆಗೆ, ಈ ಸಂಬೋಧನೆಗೆ ಎಷ್ಟು ಕಲಾವಿದರು ಭಾದ್ಯರೋ ಹೇಳುವುದು ಕಷ್ಟ. ಆದರೆ ಈ ಎರಡೂ ಗುಣವಾಚಕಗಳಿಗೆ ತಕ್ಕವರಂತೂ ಆಗಿಹೋಗಿದ್ದಾರೆ ಎಂಬುದಂತೂ ನಿಜ. ಅಥಹವರಲ್ಲಿ ಮೈಸೂರಿನ ಕೆ. ವೆಂಕಟಪ್ಪ ಅಗ್ರಗಣ್ಯರು, ಮಾನ್ಯರು.

ಇದನ್ನು ಕೇವಲ ಒಬ್ಬ ಅಥವಾ ಕೆಲವು ಜನರ ಅಭಿಪ್ರಾಯದಿಂದ ನಿರ್ಣಯಿಸಿದ್ದಲ್ಲ, ಅವರನ್ನು ಬಲ್ಲ, ಅವರ ಜೀವನವನ್ನು ವೀಕ್ಷಿಸಿದ, ಅವರ ಕಲೆಯ ಮಹತ್ವವನ್ನು ಅಳೆದ, ಅವರ ಗುಣಾವಗುಣಗಳನ್ನು ವಿಮರ್ಶಿಸಿರುವ ಮತ್ತು ಅವರ ವ್ಯಕ್ತಿತ್ವವನ್ನು ತರ್ಕಿಸಿರುವ ಎಲ್ಲರ ಅಭಿಪ್ರಾಯವೂ ಹೌದು. ಅವರ ಬಗ್ಗೆ ಓದಿ, ಕೇಳಿ, ತಿಳಿದಿರುವವರಿಗೂ ಇದೇ ಅಭಿಮತ ಉಂಟಾಗಲು ಸಾಕು. ಎಂತಲೇ ಅವರು ಅಂದೂ ಗೌರವಾನ್ವಿತರು ಇಂದೂ, ಎಂದರೆ ಅವರ ಶತಮಾನೋತ್ಸವವನ್ನು ಆಚರಿಸುತ್ತಿರುವ ಸಂದರ್ಭದಲ್ಲೂ, ಅಷ್ಟೇ ಆದರಣೀಯರು. ಎಂದಮೇಲೆ ಮೈಸೂರಿನ, ಅದಕ್ಕೂ ಹೆಚ್ಚಾಗಿ ವೆಂಕಟಪ್ಪನವರು ಪ್ರತಿನಿಧಿಸಿದ ಬಂಗಾಲದ ಕಲಾ ಶೈಲಿ ಜೀವಂತವಾಗಿರುವವರೆಗೂ ಅವರ, ಅವರ ಕಲೆಯ ಕೀರ್ತಿ ಜೀವಂತ, ಅವರ ಹೆಸರೂ ಅಜರಾಮರ.

ಭಾರತೀಯ, ಬಂಗಾಲದ ಮತ್ತು ಮೈಸೂರಿನ ಕಲಾ ಸಿರಿಯನ್ನು ಸಂಪದ್ಭರಿತವನ್ನಾಗಿಸಿದ ಕೆಲವೇ ಕಲಾವಿದರಲ್ಲಿ ವೆಂಕಟಪ್ಪನವರೂ ಒಬ್ಬರು. ಗುರು ಅವನೀಂದ್ರನಾಥ ಠಾಕೂರರ ಶಿಷ್ಯವೃಂದದಲ್ಲೂ ಅವರಿಗೆ ಅಗ್ರಸ್ಥಾನ ಲಭ್ಯವಾಗಿದೆ. ಆ ಭಾರತೀಯ ಸಾಂಸ್ಕೃತಿಯ ಪುನರುಜ್ಜೀವನಕ್ಕೆ ಕಾರಣರಾದ ಕಲಾಗುರುಗಳೂ ತಮ್ಮ ನೆಚ್ಚಿನ ಈ ಶಿಷ್ಯೋತ್ತಮನನ್ನು ಮೆಚ್ಚಿಕೊಂಡಿದ್ದರು. ತಮ್ಮ ವಿದ್ಯೆಯನ್ನು ಧಾರೆ ಎರೆದು ಅವರನ್ನು ತಮ್ಮ ಔರಸ ಪುತ್ರನನ್ನಾಗಿಸಿಕೊಂಡಿದ್ದರು. ಎಂತಲೇ ಈ ಶಿಷ್ಯನ ಯೋಗಕ್ಷೇಮವನ್ನು ಮೇಲಿಂದ ಮೇಲೆ ವಿಚಾರಿಸಿಕೊಳ್ಳುತ್ತಲೇ ಇದ್ದರು. ಅದು ಒಂದು ಅಪೂರ್ವ ಗುರು ಶಿಷ್ಯ ಸಂಬಂಧ.

ಅಂಥಹ ಗುರುವಿನ ಆಶೀರ್ವಾದವನ್ನು ಸಂಪಾದಿಸಿದ ಮತ್ತು ಅಷ್ಟೇ ಮಹತ್ವವಾದ ರಾಜಾಶ್ರಯವನ್ನು ಪಡೆದ ಕಲಾವಿದನ ಉದ್ದೇಶ ಸಾಧನೆಗೆ ಎಲ್ಲಿನ ತಡೆ? ಅದರಲ್ಲೂ ಇವೆರಡರ ಜೊತೆಗೆ ಆದರ್ಶ ಮತ್ತು ಸತತ ಪ್ರಯತ್ನಗಳೂ ಸೇರಿದಾಗ ಅದರ ಪರಿಣಾಮ ಸತ್ವಪೂರ್ಣವಾಗದಿರಲು ಹೇಗೆ ಸಾಧ್ಯ? ಎಂತಲೇ ವೆಂಕಟಪ್ಪನವರ ಜೀವನ ಒಂದು ಸೊಗಸಾದ ಸಾಫಲ್ಯದ ಕಥೆಯಂತೆ ಓದಿಸಿಕೊಳ್ಳುತ್ತದೆ. ಈ ಕಥೆಯನ್ನು, ಕಥನವನ್ನು ನಿರೂಪಿಸುವಲ್ಲಿ ಆ ಮಹಿಮಾನ್ವಿತರನ್ನು ಹತ್ತಿರದಿಂದ ನೋಡಿ, ಅವರ ಕಾರ್ಯ ವ್ಯಾಪ್ತಿಯನ್ನು ನೋಡಿ ಮೆಚ್ಚಿಕೊಂಡ ಹಲವರ ಲೇಖನಗಳು ನೆರವಾಗಿವೆ. ಅವರಿಗೆಲ್ಲಾ ನಮ್ಮ ಅಕಾಡೆಮಿಯು ಚಿರಋಣಿ.

ಅದಕ್ಕೂ ಮಿಗಿಲಾಗಿ ತಮ್ಮ ಜೀವನವನ್ನೇ ಕಲೆಗಾಗಿ ಮುಡಿಪಿಟ್ಟ ಆ ಕಲಾವಿದರಿಗೆ ಗೌರವವನ್ನು ಅರ್ಪಿಸುವ ಸದಾವಕಾಶವು ದೊರಕಿಸಿದ್ದಕ್ಕಾಗಿ ಅಕಾಡೆಮಿಯ ಸದಸ್ಯರು ತಮ್ಮನ್ನು ಹಾಗೂ ನಮ್ಮ ಅಕಾಡೆಮಿಯನ್ನು ಅಭಿನಂದಿಸಿಕೊಂಡು ಆ ಮಹಾನ್ ಕಲಾವಿದರಿಗೆ ತನ್ನ ಶ್ರದ್ಧಾ ತರ್ಪಣವನ್ನು ನೀಡುತ್ತಿದೆ.

ಇತಿ
ಸೋಮಶೇಖರ ಎಂ ಸಾಲಿ
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ

ಬೆಂಗಳೂರು
20-2-87

## ವಿಷಯ ಸೂಚಿ



## ವರ್ಣ ಚಿತ್ರಗಳು

## INDEX



## COLOUR PLATES

# ವರ್ಣಶಿಲ್ಪಿ ವೆಂಕಟಪ್ಪನವರಿಗೆ

ಬಾಯಿರದ ಬಣ್ಣಗಳಿಗೀವೆ ವಾಕ್‌ಶಕ್ತಿಯನು
ಮೌನೋಪದೇಶಕನೆ, ವರ್ಣಶಿಲ್ಪಿ.
ಕಿವಿ ಕೇಳಲಾರದಿರುವವ್ಯಕ್ತ ಗಾನವನು
ಕಂಗಳಾಲಿಸುವಂತೆ ಮಾಡುತಿರುವೆ!
ಮಾತು ಬಣ್ಣಿಸಲರಿಯದಿಹ ಭಾವ ಜಾಲವನು,
ಬಣ್ಣಗಳ ಕಬ್ಬಿಗನೆ, ಬಣ್ಣಿಸಿರುವೆ.
ಭೂತಕಾಲವ ಸುಲಿದು ವರ್ತಮಾನಕೆ ನೀಡಿ
ಭವಿತವ್ಯಕಿಣುಕುತಿಹೆ, ಚಿತ್ರಯೋಗಿ!
ಕಾಳಿದಾಸನ ಕಣ್ವನೀ ಕಣ್ವಗೆರೆಗೆ ಬರಲಿ!
ಮೇಣಾ ಶಕುಂತಳೆ ಇವಳ್ಗೆ ಸಖಿಯಾಗೆ ಬರಲಿ!
ಕಾಳಿದಾಸನೆ ನಿನ್ನೆಡೆಗೆ ಶಿಷ್ಯನಾಗೆ ಬರಲಿ!
ಕುಶಲತೆಯ ಗುಟ್ಟರಿಯೆ ಬೊಮ್ಮ ನಿನ್ನೆಡೆಗೆ ಬರಲಿ!

30-5-1929

* ಶ್ರೀ ಕೆ. ವೆಂಕಟಪ್ಪನವರು ಕರುವಿಟ್ಟ ಶಕುಂತಲೆ ಕಣ್ವಾಶ್ರಮದಿಂದ ಬೀಳ್ಕೊಳ್ಳುವ ಮೃತ್ತಿಕಾ ಚಿತ್ರದಿಂದ ಪ್ರೇರಿತವಾದದ್ದು.

ಕುವೆಂಪು

# ವರ್ಣಶಿಲ್ಪಿ

ಸುರುಚಿರ ಸ್ವಪ್ನಮಯ ಕಲ್ಪನಾಕಾಶದಲಿ
ಮಿಂಚಿಬಹ ಮಳೆಬಿಲ್ಲುಗಳ ಗೊಂಚಲನು ಕೊಯ್ದು
ಮಧುರ ವೈಚಿತ್ರ್ಯಮಯ ವರ್ಣಜಾಲವ ನೆಯ್ದು
ಸಗ್ಗವನೆ ಸೆರೆಗೈದು ಮರ್ತ್ಯಪ್ರದೇಶದಲಿ
ಬಂಧಿಸಿಹೆ, ಓ ವರ್ಣಶಿಲ್ಪಿ! ಬಹು ವೇಷದಲಿ
ಸುಳಿವ ನಶ್ವರದೆದೆಯ ಶಾಶ್ವತವನಾರೈದು
ಕನಸುಗಳ ಕೋದಿರುವೆ ನಿನ್ನ ಹರಣಂಬೊಯ್ದು
ಚಿರಕಲಾಲಿಂಗಿತ ತಟಿಲ್ಲತಾಪಾಶದಲಿ!
ನಿನ್ನ ಹೊಂಬಯಕೆಗಳ ಪುಣ್ಯ ರಸರಂಗದಲಿ
ಸಂಚರಿಸುತಿರೆ, ಬಕುತಿಯಿಂ ಬಗೆಗೆ ಗರಿಮೂಡಿ
ತೇಲಾಡಿದೆನು ನೀಲಗಿರಿ ತುಂಗಶೃಂಗದಲಿ.
ಪ್ರಕೃತಿ ಸೌಂದರ್ಯಪೂರದಿ ಮುಳುಗಿ ತೇಕಾಡಿ
ಮರುಮೆಯ್ಯ ಪಡೆದಿರುವೆನಾತ್ಮದಲಿ, ನರನಂತೆ
ಬಂದ ನಾಂ ಮರಳಿ ತೆರಳುವೆನುರಿವ ಸುರನಂತೆ!

16-8-1931

* ಶ್ರೀ ಮಾನ್ಯ ಕೆ. ವೆಂಕಟಪ್ಪನವರ ಕಲಾಶಾಲೆಯಲ್ಲಿ ನೀಲಗಿರಿಯ ಚಿತ್ರಗಳನ್ನು ನೋಡಿ ಬಂದು ಬರೆದುದು.

# ಕಲಾತಪಸ್ವಿ

ಎಂ.ವಿ. ಸೀತಾರಾಮಯ್ಯ

ನಾನೊಬ್ಬ ಸಾಹಿತಿಯಾಗಿ ಸಾರ್ವಜನಿಕ ಸಮಾರಂಭಗಳಲ್ಲಿ ಭಾಗವಹಿಸಿದ ಸಂದರ್ಭಗಳಲ್ಲಿ ಸಭೆಗೆ ನನ್ನ ಪರಿಚಯ ಮಾಡಿಕೊಡುವಾಗ ಚಿತ್ರಕಲೆಯಲ್ಲಿ ನಾನು ಅಲ್ಪಸ್ವಲ್ಪ ಪರಿಶ್ರಮ ಮಾಡಿರುವುದನ್ನು ಬಲ್ಲ ಕಾರ್ಯನಿರ್ವಾಹಕರು ನಾನು ಖ್ಯಾತ ಕಲಾವಿದ ಕೆ. ವೆಂಕಟಪ್ಪನವರ ಶಿಷ್ಯ ಎಂದು ಕೆಲವೊಮ್ಮೆ ಹೇಳಿರುವುದುಂಟು. ಈ ಹೇಳಿಕೆಯನ್ನು ಅಲ್ಲಗಳೆಯಹೋಗಿಲ್ಲ . ಏಕೆಂದರೆ, ನಾನೊಬ್ಬ ಕಲಾವಿದನಾಗಿ ಪ್ರಸಿದ್ಧಿಗೆ ಬಾರದಿದ್ದರೂ, ನನ್ನ ಅಪರಿಪೂರ್ಣ ಅಧ್ಯಾದಿಷ್ಟಿ ಕಲಾಸಾಧನೆಯ ಎಳವರೆಯದ ದಿನಗಳಲ್ಲಿ ಏಕಲವ್ಯಕಲ್ಪದ್ವಾರ ಪೂಜ್ಯ ವೆಂಕಟಪ್ಪನವರನ್ನು ಗುರುವಾಗಿ ಆರಾಧಿಸಿದ್ದೇನೆ, ಅವರ ಶಿಷ್ಯನಾಗಬೇಕೆಂಬ ಹೆಬ್ಬಯಕೆಯಿಂದ ಅವರನ್ನು ಆಶ್ರಯಿಸಿದ್ದೇನೆ; ಶಿಷ್ಯನಾಗಬೇಕೆಂದು ಪ್ರಯತ್ನಿಸಿಯೂ ಇದ್ದೇನೆ.

ಅವರ ಶಿಷ್ಯನಾಗುವ ಭಾಗ್ಯ (ಇನ್ನು ಒಬ್ಬಿಬ್ಬರಿಗೆ ದೊರಕದೆ ಹೋದ ಹಾಗೆಯೇ) ನನಗೆ ದೊರಕದೆ ಹೋದರೂ, ಮೈಸೂರಿನಲ್ಲಿ ಕಾಲೇಜು ವಿದ್ಯಾರ್ಥಿಯಾಗಿದ್ದ ದಿನಗಳಲ್ಲಿ ಅವರ ಹಲಕೆಲವು ವರ್ಣಚಿತ್ರಗಳನ್ನು ಅವಲೋಕಿಸುವ, ಕೆಲವು ಸಲವಾದರೂ ಅವರ ಸ್ಟುಡಿಯೋದಲ್ಲಿ ಅವರನ್ನು ಭೇಟಿಮಾಡುವ, ಕಾಲೇಜು ಆವರಣದಲ್ಲಿ ಅವರೊಂದಿಗೆ ಕಲಾವಿಷಯವಾಗಿ ಮಾತಾಡಿ ಆ ಬಗೆಗೆ ಅವರ ಅಭಿಪ್ರಾಯಗಳನ್ನು ತಿಳಿದುಕೊಳ್ಳುವ ಸಂದರ್ಭಗಳು ನನಗೆ ಒದಗಿಬಂದಿವೆ. ಕೇವಲ ಒಮ್ಮೆಮಾತ್ರ ಸಂಜೆಯ ವೇಳೆ ಕುಕ್ಕರಹಳ್ಳಿಕೆರೆ ಏರಿಯ ಮೇಲೆ ಅವರೊಂದಿಗೆ ನಡೆದಾಡುವ ಅಮೂಲ್ಯ ಅವಕಾಶವೂ ಲಭ್ಯವಾಗಿತ್ತು .

ಆಗ, ನಾನು ಮೌನ; ಅವರೂ ಮೌನ. ವಯಸ್ಸಿನಲ್ಲಿ , ಕಲಾಸಾಧನೆಯಲ್ಲಿ ಅಜಗಜಾಂತರ ಅದ್ದರಿಂದ, ಪೂಜ್ಯಭಾವನೆ ಇದ್ದುದ್ದರಿಂದ ನಾನೇ ಮಾತಿಗೆ ಮೊದಲು ಮಾಡುವ ಧೈರ್ಯ ಇರಲಿಲ್ಲ ನನಗೆ. ಆಗ ಇನ್ನೂ 17-18ರ ಪ್ರಾಯದ ಇಂಟರ್‌ಮೀಡಿಯಟ್ ವಿದ್ಯಾರ್ಥಿ. ಅವರಿಗೆ 35-40ರ ಪ್ರಾಯ ಇದ್ದಿರಬಹುದು. ಸಂದರ್ಭ ಸನ್ನಿವೇಶ ಯಾವುದೇ ಆಗಿರಲಿ, ಅವರ ಚಿತ್ರಕರ್ಮವನ್ನು ನೋಡಿ ತಿಳಿಯಲು, ಚಿತ್ರಕಲೆಯ ಮರ್ಮವನ್ನು ಅವರ ಬಾಯಿಂದ ತಾನಾಗಿ ಬಂದಷ್ಟನ್ನು ಕೇಳಿ ತಿಳಿಯಲು, ನನಗೆ ಅವಕಾಶ ದೊರಕಿದೆ. ಈ ಅವಕಾಶದಲ್ಲಿ ದಕ್ಕಿಸಿಕೊಂಡಷ್ಟನ್ನು ನನ್ನ ಚಿತ್ರನಿರ್ಮಾಣ ಪ್ರಯತ್ನಗಳಲ್ಲಿ ರೂಢಿಸಿಕೊಳ್ಳಲು ಪ್ರಯತ್ನಪಟ್ಟಿದ್ದೇನೆ. ಹೀಗಿದ್ದು ಆ ಮಹಾನುಭಾವನನ್ನು ಗುರು ಎಂದು ನಾನು ಅಂಗೀಕರಿಸಿದ್ದರಲ್ಲಿ ಅನೌಚಿತ್ಯ ಏನೂ ಕಾಣಿಸುವುದಿಲ್ಲ . ಆದರೆ, ಅವರ ಕಲಾಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗುವ, ಅವರ ವಾಸ್ತವ ಶಿಷ್ಯನಾಗುವ ಭಾಗ್ಯ ನನಗೇ ಆಗಲಿ ಯಾರಿಗೇ ಆಗಲಿ ಲಭಿಸಲಿಲ್ಲ . ಇದಕ್ಕೆ ಮುಖ್ಯ ಕಾರಣ, ಅವರು ಶಿಷ್ಯಪರಿಗ್ರಹಣಕ್ಕೆ ವಿಧಿಸುತ್ತಿದ್ದ ಕಟ್ಟುನಿಟ್ಟಿನ ನಿಯಮಪಾಲನೆ; ಕಲಾಸಾಧನೆಗೆ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡು, ಕಲಾದೇವಿಯನ್ನು ಏಕನಿಷ್ಠೆಯಿಂದ ಆರಾಧನೆ ಮಾಡಬೇಕು ಎಂಬ ಅವರ ನಿರೀಕ್ಷೆ.

ಕಲಾರಾಧನೆಯನ್ನು ಒಂದು ಕಠಿಣತಮ ತಪಶ್ಚರ್ಯೆಯಾಗಿ ಕೈಗೊಂಡು ನುಡಿದಂತೆ ನಡೆಯುತ್ತಿದ್ದ ಕಲಾತಪಸ್ವಿಯಾಗಿದ್ದರು ವೆಂಕಟಪ್ಪನವರು. ತಮ್ಮ ಶಿಷ್ಯರಾಗತಕ್ಕವರೂ ತಮ್ಮ ಹಾಗೆಯೇ ಸಂಸಾರದ ಬಂಧನಕ್ಕೆ ಸಿಲುಕಿಕೊಳ್ಳದೆ ವ್ಯಕ್ತಿಸ್ವಾತಂತ್ರ್ಯವನ್ನೂ ಕಾರ್ಯ ಸ್ವಾತಂತ್ರ್ಯವನ್ನೂ ಕಾಯ್ದುಕೊಳ್ಳಬೇಕು ಎಂದು ಶಿಷ್ಯರಾಗಬಯಸಿ ಬಂದವರಿಗೆ ಕಡ್ಡಾಯದ ಕಟ್ಟಳೆ ವಿಧಿಸುತ್ತಿದ್ದರು. ಅವರೊಬ್ಬ ನೈಷ್ಠಿಕ ಬ್ರಹ್ಮಚಾರಿಯಾಗಿದ್ದರು ಎಂಬ ಸತ್ಯಸಂಗತಿ ಅನೇಕರಿಗೆ ತಿಳಿದಿರಲಾರದು. ಅವರ ಆದರ್ಶದ ಶಿಷ್ಯ ಅವರಿಗೆ ದೊರಕಲಿಲ್ಲ ಎಂದು ಕಾಣುತ್ತದೆ. ಅವರ ಕಲಾಸಂಪ್ರದಾಯ ಅವರೊಂದಿಗೇ ಕೊನೆಗಂಡಿತು.

ನಾನು ಅವರ ಶಿಷ್ಯನಾಗಲು ಬಯಸಿ ಪ್ರಯತ್ನಪಟ್ಟು ನಿರಾಶೆಗೊಂಡ ಸಂದರ್ಭದ ವಿವರಗಳನ್ನು ನನ್ನ ಹಿಂದಿನ ಒಂದು ಲೇಖನದಲ್ಲಿ ನಿರೂಪಿಸಿದ್ದೇನೆ. (ಈ ಲೇಖನ ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನುಡಿಯಲ್ಲಿ ಸುಮಾರು 15 ವರ್ಷಗಳ ಹಿಂದೆ ಪ್ರಕಟವಾಗಿದೆ. ಇಲ್ಲಿ ಆ ಸಂದರ್ಭವನ್ನು ಬಹಳ ಸಂಕ್ಷೇಪವಾಗಿ ತಿಳಿಸಬಯಸುತ್ತೇನೆ. ವೆಂಕಟಪ್ಪನವರು ಕಲಾಸಾಧನೆಯನ್ನೂ ಒಂದು ಉಪಾಸನೆಯನ್ನಾಗಿ, ತಪಸ್ಸನ್ನಾಗಿ ಸ್ವೀಕರಿಸಿದ್ದರು ಎನ್ನುವುದು ಅದರಿಂದ ಸ್ಪಷ್ಟಪಡುತ್ತದೆ.



ವೀಣೆಯ ಭ್ರಾಂತಿ

Engrossed with Veena

ಕವಿತೆ, ಕಥೆ, ಪ್ರಬಂಧ ಮುಂತಾದ ಸಾಹಿತ್ಯ ಪ್ರಕಾರಗಳ ರಚನೆಯಲ್ಲಿ ನನ್ನ ಆಸಕ್ತಿ ಮೊಳೆತು ಬೆಳೆಯುವುದಕ್ಕೂ ಮೊದಲೇ ಚಿತ್ರಕಲೆಯಲ್ಲಿ ನನ್ನ ಆಸಕ್ತಿ ಬಲವಾಗಿ ಬೇರೂರಿತ್ತು. ಹೈಸ್ಕೂಲಿನಲ್ಲಿ ಡ್ರಾಯಿಂಗನ್ನೇ ಐಚ್ಛಿಕ ವಿಷಯವಾಗಿ ತೆಗೆದುಕೊಂಡಿದ್ದೆ. ಚಾಮರಾಜೇಂದ್ರ ಟೆಕ್ನಿಕಲ್ ಇನ್ಸ್ಟಿಟ್ಯೂಟ್‌ನ ಚಿತ್ರಕಲಾ ಶಿಕ್ಷಣ ವಿಭಾಗಕ್ಕೆ ಪಾರ್ಟ್‌ಟೈಮ್ ವಿದ್ಯಾರ್ಥಿಯಾಗಿಯೂ ಒಂದು ವರ್ಷ ಫ್ರೀಹ್ಯಾಂಡ್ ಡ್ರಾಯಿಂಗ್‌ನಲ್ಲಿ ತರಬೇತಿ ಪಡೆದಿದ್ದೆ. ಎಸ್.ಎಸ್.ಎಲ್.ಸಿ. ತರಗತಿಯ ಮಟ್ಟಕ್ಕೆ ಬರುವ ವೇಳೆಗಾಗಲೇ ಕೆಲವು ಕಲಾವಿದರನ್ನು ಅನುಸರಿಸಿ ವರ್ಣಚಿತ್ರಗಳನ್ನು ಸ್ವತಂತ್ರವಾಗಿ ರಚಿಸುವಮಟ್ಟಿಗೆ ಅಭ್ಯಾಸ ಮಾಡಿದ್ದೆ. 1928ರಲ್ಲಿ ಎಂದು ನೆನಪು, ನನ್ನ ವರ್ಣಚಿತ್ರಗಳು ಎರಡು ಮೂರನ್ನೂ, ಪೆನ್ ಎಂಡ್ ಇಂಕ್ ಡ್ರಾಯಿಂಗ್‌ಗಳ ಆಲ್‌ಬಮ್ಮನ್ನೂ ದಸರಾ ವಸ್ತುಪ್ರದರ್ಶನದ ಕಲಾವಿಭಾಗಕ್ಕೆ ಪ್ರದರ್ಶನಕ್ಕಾಗಿ ಕಳಿಸಿದ್ದೆ. ಅವು ಸ್ವೀಕೃತವಾಗಿ ಪ್ರದರ್ಶನಗೊಂಡದ್ದನ್ನು ಖುದ್ದಾಗಿ ನೋಡಿ ಅಪಾರ ಆನಂದವನ್ನು ಅನುಭವಿಸಿದೆ.

ಸಿದ್ಧಪ್ರಸಿದ್ಧ ಕಲಾವಿದರ ಚಿತ್ರಗಳ ಜೊತೆ ಸರಿಸಮವಾಗಿ ನನ್ನ ಕಲಾಕೃತಿಗಳನ್ನು ಏಕೆ ಪ್ರದರ್ಶಿಸುತ್ತಾರೆ ಎಂಬ ಹಿಂಜರಿಕೆ, ಸಂದೇಹ, ಅಳುಕು ಇದ್ದೇ ಇದ್ದುವು. ಆಗಿನ ದಿನಗಳಲ್ಲಿ ಪ್ರದರ್ಶನಕ್ಕೆ ಯೋಗ್ಯವಾದ ಚಿತ್ರಗಳನ್ನು ಆಯ್ಕೆಮಾಡಲು ವಸ್ತು ಪ್ರದರ್ಶನದ ಅಧಿಕಾರಿಗಳು ಒಂದು 'ತೂಗುಹಾಕುವ ಸಮಿತಿ'ಯನ್ನು (ಹ್ಯಾಂಗಿಂಗ್ ಕಮಿಟಿ) ನೇಮಕ ಮಾಡುತ್ತಿದ್ದರು. ಈ ಸಮಿತಿಯಲ್ಲಿ ಕೆ. ವೆಂಕಟಪ್ಪನವರೂ ಒಬ್ಬ ಸದಸ್ಯರಾಗಿದ್ದರು ಎಂದು ಕೇಳಿ ತಿಳಿದಾಗ ನನ್ನ ಕಲೆಯಲ್ಲಿ ನನಗೆ ಆತ್ಮವಿಶ್ವಾಸ ಮೂಡಿತು. ಕಲಾಭ್ಯಾಸವನ್ನು ಮುಂದುವರಿಸಬೇಕು, ಅದೃಷ್ಟವಿದ್ದರೆ ವೆಂಕಟಪ್ಪನವರಲ್ಲಿಯೇ ಶಿಷ್ಯವೃತ್ತಿ ಮಾಡಬೇಕು ಎಂಬ ಆಶೆಗೆ ನಿರ್ಧಾರದ ಸ್ವರೂಪ ಬಂದಿತು. ಚಿತ್ರಕಲೆಯಲ್ಲಿ ವಿಶಿಷ್ಟ ರೀತಿಯ ಸಿದ್ಧಿಯನ್ನು ಪಡೆಯಬೇಕಾದರೆ ವೆಂಕಟಪ್ಪನವರಲ್ಲಿಯೇ ಅಭ್ಯಾಸ ಮಾಡಬೇಕು ಎಂಬ ಆಸೆಯನ್ನು ಹುಟ್ಟಿಸಿದ್ದವರು ಮುಂದೆ ನನ್ನ ಕಾಲೇಜು ಕನ್ನಡ ಅಧ್ಯಾಪಕರೂ ನನ್ನ ಕವಿತಾ ರಚನೆಗೆ ಒತ್ತಾಸೆ ನೀಡುತ್ತಿದ್ದವರೂ ಆದ ತೀ.ನಂ. ಶ್ರೀಕಂಠಯ್ಯನವರು, ಹಾಗೂ ಪ್ರಾಧ್ಯಾಪಕ ಟಿ.ಎಸ್. ವೆಂಕಣ್ಣನವರು. ವೆಂಕಟಪ್ಪನವರಿಗೆ ನನ್ನ ವಿಚಾರ ಹೇಳಿ, ಅವರನ್ನು ನಾನು ನೋಡಬೇಕೆಂದು, ನೋಡಹೋಗೆಂದು ಹೇಳಿಕಳಿಸಿದವರೂ ಅವರೇ. ಈ ಇಬ್ಬರಲ್ಲದೆ ಕುವೆಂಪು, ವಿ. ಸೀತಾರಾಮಯ್ಯ, ತೆಲುಗು ವಿದ್ವಾಂಸರಾದ ರಾಳ್ಲಪಲ್ಲಿ ಅನಂತಕೃಷ್ಣ ಶರ್ಮ, ಡಿ.ವಿ.ಜಿ; ಅವರ ಮಕ್ಕಳು ಬಿ.ಜಿ.ಎಲ್. ಸ್ವಾಮಿ, ಅವರೆಲ್ಲರೂ ವೆಂಕಟಪ್ಪನವರ ಅಭಿಮಾನಿಗಳು, ಅವರ ಕಲೆಯನ್ನು ಅಂತಃಕರಣಪೂರ್ವಕವಾಗಿ ಮೆಚ್ಚಿಕೊಂಡವರು. ವೆಂಕಟಪ್ಪನವರು ಸುಮಾರು 1940 ರಲ್ಲಿ ಬೆಂಗಳೂರಿಗೆ ಬಂದಮೇಲೆ ಅವರು ಬೆಂಗಳೂರಿನಲ್ಲಿ ಒಂದು ಸ್ವಂತ ಸ್ಟುಡಿಯೋ ಕಟ್ಟಿಸಿದರು. ಸರ್ ಸಿ.ವಿ. ರಾಮನ್ ಅವರೂ ಮಲ್ಲೇಶ್ವರದಲ್ಲಿ ಪ್ರಯೋಗಶಾಲೆ ಕಟ್ಟಿಸಿಕೊಂಡು ತಮ್ಮ ಅನ್ವೇಷಣ ವಿಷಯಗಳಾದ ಬೆಳಕು, ಹರಳುಗಳು ಇವುಗಳ ಜೊತೆಗೆ ಮೃದಂಗ, ವೀಣಾವಾದ್ಯಗಳ ನಾದ ತತ್ತ್ವಗಳನ್ನು ಪರಿಶೀಲಿಸುತ್ತಿದ್ದರು. ವೆಂಕಟಪ್ಪನವರು ಮೈಸೂರು ವೀಣೆ ಶೇಷಣ್ಣನವರಲ್ಲಿ ಶಿಷ್ಯವೃತ್ತಿ ಮಾಡಿ ವೀಣಾವಾದನದಲ್ಲಿ ಪರಿಣತಿಯನ್ನು ಪಡೆದಿದ್ದರು. ವೀಣೆಯ ಒಡಲಿನ ಉಪಭಾಗಗಳಾದ ತಂತಿಕೂರುವ ಕುದುರೆ, ತಂತಿಗಳ ಹದ ಮತ್ತು ಗಾತ್ರ, ಮುಂತಾದವುಗಳ ಬಗ್ಗೆ ನಿರಂತರವಾಗಿ, ಸ್ವತಂತ್ರವಾಗಿ ಪರಿಶೀಲನೆ, ಅನ್ವೇಷಣೆ ನಡೆಸುತ್ತಿದ್ದರು.

ಈ ವಿಚಾರವನ್ನು ಕೇಳಿ ತಿಳಿದ ರಾಮನ್ ಅವರು ವೀಣಾವಾದ್ಯದ ಮರ್ಮಗಳ ಬಗ್ಗೆ ಚರ್ಚಿಸಲು, ತಿಳಿವಳಿಕೆ ಪಡೆಯಲು ಅವರಲ್ಲಿಗೆ ಹೋಗಿಬರುತ್ತಿದ್ದರು. ಇವರೆಲ್ಲರೂ ಸಂಗೀತಾಭಿಮಾನಿಗಳು. ವೆಂಕಣ್ಣಯ್ಯ ಮತ್ತು ತೀ.ನಂ. ಶ್ರೀ. ಮೈಸೂರಿನ ಬಿಡಾರಂ ಕೃಷ್ಣಪ್ಪನವರ ಶ್ರೀ ರಾಮಮಂದಿರದಲ್ಲಿ ಪ್ರದೋಷದ ದಿನದ ಕೃಷ್ಣಪ್ಪನವರ ಗಾಯನ, ರಾಮೋತ್ಸವದ ವಿಶೇಷ ಸಂಗೀತ ಕಚೇರಿಗಳು ಇವಕ್ಕೆ ತಪ್ಪದೆ ಹೋಗುತ್ತಿದ್ದರು. (ಮೃದಂಗವಾದನ ಅಭ್ಯಾಸ ಮಾಡುತ್ತಿದ್ದ ನಾನೂ ಆಗೊಮ್ಮೆ ಈಗೊಮ್ಮೆ ಹೋಗುತ್ತಿದ್ದುದುಂಟು). ಈ ಎಲ್ಲ ಮಹನೀಯರ ಹಾಗೂ ವೆಂಕಟಪ್ಪನವರ ನಡುವಣ ಸತ್ಸಂಗವೃದ್ಧಿಗೆ ಸಂಗೀತ ಒಂದು ಸೇತು ಆಗಿತ್ತು. ಈ ಎತ್ತರದ ವ್ಯಕ್ತಿಗಳು ವೆಂಕಟಪ್ಪನವರ ಬಗೆಗೆ ತಳೆದಿದ್ದ ಅಮಿತ ಗೌರಾವಾದರಗಳ ಪ್ರಮಾಣದಿಂದ ವೆಂಕಟಪ್ಪನವರ ವ್ಯಕ್ತಿತ್ವದ ಎತ್ತರವನ್ನು ಊಹಿಸಿಕೊಳ್ಳಬಹುದು.

ಪ್ರಾಸಂಗಿಕವಾಗಿ ಇಲ್ಲಿ ಒಂದು ಮಾತು ಹೇಳಬೇಕು: ಬಿಡಾರಂ ಕೃಷ್ಣಪ್ಪನವರ ರಾಮಮಂದಿರಲ್ಲಿ , ಪಟ್ಟಾಭಿಷಿಕ್ತನಾಗಿ, ಸೀತೆಯೊಂದಿಗೆ ಸಿಂಹಾಸನಾರೂಢನಾಗಿ, ಸೋದರರು, ವಶಿಷ್ಠಾದಿ ಮುನಿಗಳು, ಆಂಜನೇಯ, ಮುಂತಾದ ಪರಿವಾರದೊಂದಿಗೆ ಶೋಭಿಸುವ ಶ್ರೀರಾಮನ ದೊಡ್ಡ ಪ್ರಮಾಣದ ತೈಲ ವರ್ಣದ ಚಿತ್ರವಿದೆ. ಗೋಡೆಯ ಮೇಲೆ ಸುತ್ತಲೂ ವಿಷ್ಣುವಿನ ದಶಾವತಾರ ಚಿತ್ರಗಳಿವೆ. ಇವುಗಳ ಚಿತ್ರಕಾರರು ಶ್ರೀ ಲಕ್ಷ್ಮಣಕೃಷ್ಣ ಎಂಬ ಕಲಾವಿದರು. ಇವರು ಮೈಸೂರು ಅರಮನೆಯ ನೇಮಕದ ಕಲಾವಿದರಲ್ಲಿ ಒಬ್ಬರು. ಮುಂಬಯಿ ಶೈಲಿಯ ಕಲೆಯಲ್ಲಿ ಪರಿಣತರು. (ನಾನು ಇವರಲ್ಲಿಯೂ ಕೆಲವು ಕಾಲ ವರ್ಣಚಿತ್ರಣವನ್ನು ಅಭ್ಯಾಸ ಮಾಡಿದುದುಂಟು) ಆಗಿನ ದಿನಗಳಲ್ಲಿ ಮುಂಬಯಿ ಕಲಾಶಾಲೆ ಮತ್ತು ಕಲ್ಕತ್ತ ಕಲಾಶಾಲೆಗಳ ಪ್ರಿನ್ಸಿಪಾಲರು ಬ್ರಿಟಿಷ್ ಕಲಾಪರಿಣತರೇ ಆಗಿರುತ್ತಿದ್ದರು.

ಸ್ವಾರಸ್ಯದ ಸಂಗತಿ ಎಂದರೆ, ಮುಂಬಯಿ ಕಲಾಶಾಲೆ ಪಾಶ್ಚಾತ್ಯ ವಾಸ್ತವ ಸಂಪ್ರದಾಯದ ಶಿಕ್ಷಣವನ್ನು ನೀಡುತ್ತಿತ್ತು . ಮೈಸೂರಿನ ಕಲಾಶಾಲೆ ಮುಂಬಯಿ ಶಾಲೆಯ ಶಾಖೆ ಅಲ್ಲದಿದ್ದರೂ ಅಲ್ಲಿಯ ಕಲಾ ಸಂಪ್ರದಾಯಕ್ಕೆ ಬದ್ಧ ಎಂಬಂತೆ ತನ್ನ ಶಿಕ್ಷಣಕ್ರಮವನ್ನು ರೂಪಿಸಿ ಕಬಂಡಿತ್ತು . ಕಲ್ಕತ್ತೆಯ ಕಲಾಶಾಲೆಯ ಪ್ರಿನ್ಸಿಪಲ್ ಆಗಿದ್ದ ಪರ್ಸಿ ಬ್ರೌನ್ ಭಾರತದ ಎಲ್ಲ ದೇಶೀಯ ಕಲಾಸಂಪ್ರದಾಯಗಳನ್ನೂ ಅಧ್ಯಯನ ಮಾಡಿ, ಅವನೀಂದ್ರ ಠಾಕೂರರ ಮಾರ್ಗದರ್ಶನದಲ್ಲಿ ಕಲ್ಕತ್ತ ಶಾಲೆ ಒಂದು ಭಾರತೀಯ ಶೈಲಿಯನ್ನು ರೂಪಿಸಿಕೊಳ್ಳಲು ಧಾರಾಳವಾಗಿ ಉತ್ತೇಜನ ನೀಡಿದ್ದರು. ಭಾರತೀಯ ಸಾಹಿತ್ಯ ಪ್ರಪಂಚದಲ್ಲಿ ನವೋದಯದ ಕ್ರಾಂತಿ ಮೊದಲಾದದ್ದು ಬಂಗಾಳದಲ್ಲಿ . ಕಲಾ ಪ್ರಪಂಚದಲ್ಲಿ ಮೂಡಿದ ನವೋದಯ ಕ್ರಾಂತಿಗೂ ಬಂಗಾಳವೇ ತವರುಮನೆ. ಬಂಗಾಳಿ ಸಂಪ್ರದಾಯ ಒಂದು ಆಸ್ತಿತ್ವಕ್ಕೆ ಬರಲು ಪರ್ಸಿ ಬ್ರೌನ್ ವಾತಾವರಣವನ್ನು ಕಲ್ಪಿಸಿದರು; ರಾಜಾಸ್ತಾನದ ದೇಸಿ ಕಲಾಪದ್ಧತಿ, ಮುಘಲ್ ಚಿತ್ರಸಂಪ್ರದಾಯ, ಅಜಂತಾಗುಹೆಗಳ ಭಿತ್ತಿಚಿತ್ರ ಸಂಪ್ರದಾಯ (Mural Painting), ಚೀನಾ ಮತ್ತು ಜಪಾನಿ ಕಲಾ ಸಂಪ್ರದಾಯ, ಇವೆಲ್ಲದರ ಸಂಮಿಶ್ರಪ್ರಭಾವದ ಶಿಶು ಬಂಗಾಳಿ ಸಂಪ್ರದಾಯ; ಇದರ ಜನ್ಮದಾತರು ಅವನೀಂದ್ರನಾಥ ಠಾಕೂರರು. ಮುಂದೆ ಶಾಂತಿನಿಕೇತನದ ಕಲಾ ಆಚಾರ್ಯರಾದ ನಂದಲಾಲ ಬೋಸ್, ಮದರಾಸು ಕಲಾಶಾಲೆಯ ಪ್ರಿನ್ಸಿಪಾಲ್ ಆದ ರಾಯ್ ಚೌಧುರಿ, ಚುಗ್ತಾಯ್ — ಇವರೆಲ್ಲರೂ ನೂತನಕಲಾ ಶೈಲಿಯ ಪ್ರವರ್ತಕರಾದ ಅವನೀಂದ್ರ ನಾಥ ಠಾಕೂರರ ಶಿಷ್ಯರು. ವೆಂಕಟಪ್ಪನವರೂ ಅವನೀಂದ್ರನಾಥ ಠಾಕೂರರ ಶಿಷ್ಯರು. ಕಲ್ಕತ್ತೆಯಲ್ಲಿ ಎಲ್ಲವನ್ನೂ ಮರೆತು — ತೊರೆದು — ಗುರುವನ್ನು ಅತ್ಯಂತ ಭಕ್ತಿಗೌರವದಿಂದ ಕಾಣುತ್ತ , ಕಲ್ಕತ್ತೆಯಲ್ಲಿ ಇದ್ದಷ್ಟು ಕಾಲವೂ ಅವರು ಗುರುವಿಗೂ ಗೆಳೆಯರಿಗೂ ವೆಂಕಟಪ್ಪ ಅಲ್ಲ , ಬರಿಯ 'ಅಪ್ಪ' ಆಗಿದ್ದರು. ಅದು ಗುರು ಕರೆದ ಹೆಸರು. ಶಿಷ್ಯವಾತ್ಸಲ್ಯದ ಪ್ರತೀಕ.

ಮೈಸೂರಿಗೆ ಹಿಂದಿರುಗಿದ ಮೇಲೆ ವೀಣೆ ಶೇಷಣ್ಣನವರ ವೀಣೆ ನುಡಿಕೆಯನ್ನು ಕೇಳಿ ಅವರ ವಾದನ ವೈಖರಿಗೆ ಮುಗ್ಧರಾಗಿ ವೀಣೆ ಕಲಿಯಬೇಕೆಂಬ 'ಹುಚ್ಚು' ವೆಂಕಟಪ್ಪನವರಿಗೆ ಹಿಡಿಯಿತು. ಅವರು ಹೇಗೆ ಯಾರ ಮುಖಾಂತರ ಶೇಷಣ್ಣನವರ ಮನಸ್ಸನ್ನು ಒಲಿಸಿಕೊಂಡು ಅವರ ಶಿಷ್ಯರಾದರೋ ಆ ವಿವರಗಳನ್ನು ನಾನು ಕಂಡಾಗಲಿ ಕೇಳಿಯಾಗಲಿ ಅರಿಯೆ. ಚಿತ್ರಕಲಾ ಉಪಾಸನೆಯನ್ನು ಯಾವರೀತಿ ಏಕನಿಷ್ಠೆಯಿಂದ ಸಾಧಿಸುತ್ತಿದ್ದರೋ ಅದೇ ರೀತಿಯ ನಿಷ್ಠೆಯಿಂದ ಶೇಷಣ್ಣನವರ ಪಾದದಡಿಯಲ್ಲಿ (ನಾನು ಕೇಳಿ ತಿಳಿದಿರುವ ಪ್ರಕಾರ) ಹನ್ನೆರಡು ವರ್ಷಕಾಲ ವೀಣಾವಾದನದಲ್ಲಿ ಶಿಕ್ಷಣ ಪಡೆದರು. ಈ ಕಲಿಕೆಯ ಕಾಲದಲ್ಲಿ ಚಿತ್ರಕಲಾ ಗುರುವಾಗಿದ್ದ ಅವಿನೀಂದ್ರನಾಥ ಠಾಕೂರರು ಕಲೆಯಲ್ಲಿ 'ಅಪ್ಪ'ನ ಪುರೋಭಿವೃದ್ಧಿಯನ್ನು ಕುರಿತು ಪತ್ರಗಳನ್ನು ಬರೆದರು. ಶಿಷ್ಯನ ಕಡೆಯಿಂದ ಉತ್ತರವಿಲ್ಲ . ಶಿಷ್ಯನ ಮೌನ ಅರ್ಥವಾಗದೆ ಸ್ವಲ್ಪ ಬೇಸರದಿಂದ, ಅದಕ್ಕೂ ಮಿಗಿಲಾದ ಆತಂಕದಿಂದ ಕೊನೆಯ ಪತ್ರ ಬರೆದರು. ಶಿಷ್ಯನ ಉತ್ತರ ಸಿದ್ಧವಾಗಿತ್ತು : ಪತ್ರವಲ್ಲ , Mad after Veena (ವೀಣೆಯ ಹುಚ್ಚು) ಎಂಬ ಜಲವರ್ಣ ಚಿತ್ರ. ಅದು ಚಿರಪರಿಚಿತವಾದ ಅದ್ಭುತ ಚಿತ್ರ.

ವೆಂಕಟಪ್ಪನವರ ಕೆಲವು ಚಿತ್ರಗಳನ್ನು ನಾನು ಮೊತ್ತಮೊದಲು ಅವಲೋಕಿಸಿದ ಸಂದರ್ಭವನ್ನು ತಿಳಿಸುವುದು ಅಗತ್ಯ. ಏಕೆಂದರೆ, ಚಿತ್ರಕಲೆಯನ್ನು ಉಚ್ಚ ಮಟ್ಟದಲ್ಲಿ ಅಭ್ಯಾಸ ಮಾಡುವುದಾದರೆ ಅವರನ್ನೇ ಆಶ್ರಯಿಸಬೇಕು ಎಂದು ಆ ಸಂದರ್ಭದಲ್ಲಿಯೇ ನಾನು ನಿರ್ಧಾರ ಮಾಡಿದ್ದು .

ಆಗ ನಾನು ಹೈಸ್ಕೂಲು ವಿದ್ಯಾರ್ಥಿ. ಸುಮಾರು 17ರ ಪ್ರಾಯ. ಜೆ.ಎಚ್. ಕಸಿನ್ಸ್‌ರವರು ಮೈಸೂರಿಗೆ ಬಂದಿದ್ದರು. ಅವರು ಭಾರತೀಯ ಸಂಸ್ಕೃತಿಯ ಅಭಿಮಾನಿ. ಬಂಗಾಳಿ ಸಂಪ್ರದಾಯದ ಚಿತ್ರಸಂಗ್ರಹವನ್ನು ಭಾರತದ ಪ್ರಮುಖ ಸ್ಥಳಗಳಲ್ಲಿ ಪ್ರದರ್ಶಿಸುವ ಕಾರ್ಯಕ್ರಮ ಹಾಕಿಕೊಂಡಿದ್ದರು. ಪ್ರದರ್ಶನದ ಜೊತೆಗೆ ಎಪಿಡಿಯಾಸ್ಕೋಪಿನಲ್ಲಿ (ಆಗ ಅದನ್ನು ಮ್ಯಾಜಿಕ್ ಲ್ಯಾಂಟರ್ನ್ ಎಂದು ಕರೆಯುತ್ತಿದ್ದೆವು) ಕೆಲವು ಚಿತ್ರಗಳನ್ನು ಪ್ರದರ್ಶಿಸಿ, ಉಪನ್ಯಾಸಗಳನ್ನೂ ಮಾಡುತ್ತಿದ್ದರು. ಇಂಥ ಒಂದು ಕಾರ್ಯಕ್ರಮ ಮೈಸೂರು ಮಹಾರಾಜ ಕಾಲೇಜಿನ ವಿದ್ಯಾರ್ಥಿ ಸಂಘದ (ಯೂನಿಯನ್) ಆಶ್ರಯದಲ್ಲಿ ಏರ್ಪಾಡಾಗಿತ್ತು. ನನ್ನ ಕಲಾಭಿವೃದ್ಧಿಯಲ್ಲಿ ಆಸಕ್ತಿ ವಹಿಸಿದ್ದ ನನ್ನ ಹಿರಿಯಣ್ಣ (ಮಹಾರಾಜ ಕಾಲೇಜಿನ ವಿದ್ಯಾರ್ಥಿ) ನನ್ನನ್ನು ಪ್ರದರ್ಶನಕ್ಕೂ, ಉಪನ್ಯಾಸಕ್ಕೂ ಕರೆದುಕೊಂಡು ಹೋಗಿದ್ದ. ಹೆಚ್ಚಿನ ಸಂಖ್ಯೆಯ ಪ್ರೇಕ್ಷಕರು ಕಾಲೇಜು ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು, ಪ್ರೊ। ವೆಂಕಣ್ಣನವರೂ, ತೀ.ನಂ. ಶ್ರೀಕಂಠಯ್ಯನವರೂ ಪ್ರೇಕ್ಷಕವರ್ಗದಲ್ಲಿದ್ದರು. ತೀ.ನಂ. ಶ್ರೀ. ಆಗ ಇನ್ನೂ ಅಧ್ಯಾಪಕರಾಗಿರಲಿಲ್ಲ; ಆದರೆ, ಇಂಗ್ಲಿಷ್ ಎಂ.ಎ. ಮಾಡಿಕೊಂಡು ಕನ್ನಡ ಎಂ.ಎ.ಗೆ ಓದುತ್ತಿದ್ದರು, ಗುರುವಿಗೆ ಬಹಳ ಆಪ್ತರಾಗಿಬಿಟ್ಟಿದ್ದರು. ನಮ್ಮ ಮನೆಯಲ್ಲಿ ನ್ಯಾಸಂಗ ಮಾಡುತ್ತಿದ್ದ ನನ್ನ ಚಿಕ್ಕಮ್ಮನ ಮಗ ಬಿ. ನಂಜುಡಯ್ಯ ತೀ.ನಂ. ಶ್ರೀ. ಅವರ ಸಹಪಾಠಿ. ಅವನನ್ನು ಕಾಣಲು ತೀನಂ.ಶ್ರೀ. ನಮ್ಮ ಮನೆಗೆ ಬಂದು ಹೋಗುತ್ತಿದ್ದರು. ನನ್ನ ಬರವಣಿಗೆಯನ್ನು ಪರಿಶೀಲಿಸಿ ಸಲಹೆ ಸೂಚನೆ ಕೊಡುತ್ತಿದ್ದರು. ನನ್ನ ರೇಖಾ, ವರ್ಣಚಿತ್ರಗಳನ್ನು ಮೆಚ್ಚಿಕೊಂಡಿದ್ದರು. ಇವರು ಚಿತ್ರವೀಕ್ಷಣೆ ಮಾಡುತ್ತಿದ್ದ ನನ್ನನ್ನು ವೆಂಕಣ್ಣಯ್ಯನವರಿಗೆ ಪರಿಚಯ ಮಾಡಿಕೊಟ್ಟರು. ಮುಂದೆ ನಾನು ವೆಂಕಟಪ್ಪನವರ ಶಿಷ್ಯವೃತ್ತಿಯನ್ನು ಬಯಸಿ ಅವರ ಸಂದರ್ಶನ ಪಡೆಯಬೇಕೆಂದು ಹಾತೊರೆಯುತಿದ್ದಾಗ ನನ್ನ ಬಗ್ಗೆ ವೆಂಕಟಪ್ಪನವರಿಗೆ ಎರಡು ಒಳ್ಳೆ ಮಾತು ಹೇಳಿ ಕಳಿಸಿಕೊಟ್ಟವರೂ ವೆಂಕಣ್ಣಯ್ಯನವರೇ.

ಕಾಲೇಜು ಯೂನಿಯನ್ನಿನ ಮಹಡಿಯ ಮೇಲೆ ಪ್ರದರ್ಶನಗೊಂಡಿದ್ದ ಪರಿಮಿತ ಸಂಖ್ಯೆ ವರ್ಣಚಿತ್ರಗಳಲ್ಲಿ ಎಲ್ಲವೂ ಬಲುಮಟ್ಟಿಗೆ ಬಂಗಾಳಿ ಸಂಪ್ರದಾಯದ ಚಿತ್ರಗಳೇ. ಇವುಗಳಲ್ಲಿ ವೆಂಕಟಪ್ಪನವರ ಉದಕಮಂಡಲದ ಕೆಲವು ಭೂದೃಶ್ಯಚಿತ್ರಗಳೂ, ಮಹಾಶಿವರಾತ್ರಿ ಎಂಬ ಚಿತ್ರವೂ ಉಷ್ಟ್ರಪಕ್ಷಿಯ ಒಂದು ಚಿತ್ರವೂ ಪ್ರಮುಖವಾಗಿ ಪ್ರೇಕ್ಷಕರ ಗಮನ ಸೆಳೆಯುತ್ತಿದ್ದುವು. 'ಮಾಡರ್ನ್ ರೆವ್ಯೂ' ಎಂಬ ಉನ್ನತ ಮಟ್ಟದ ಕಲ್ಕತ್ತೆಯ ಪತ್ರಿಕೆಯ ಪ್ರತಿ ಸಂಚಿಕೆಯಲ್ಲಿಯೂ ವಂಗಸಂಪ್ರಾದಾಯದ ವರ್ಣಚಿತ್ರದ ಪ್ರತಿಕೃತಿ ಪ್ರಕಟವಾಗುತ್ತಿತ್ತು. ಆದ್ದರಿಂದ ಕಾಲೇಜಿನ ಅಧ್ಯಾಪಕ ವರ್ಗಕ್ಕೂ ವಿದ್ಯಾರ್ಥಿ ವೃಂದಕ್ಕೂ ವಂಗಸಂಪ್ರದಾಯದ ಕಲೆ ಹೊಸದೇನೂ ಆಗಿರಲಿಲ್ಲ. ಆದರೆ ವಂಗಸಂಪ್ರದಾಯದ ವರ್ಣವಿಧಾನವಾಗಲಿ ಮಾನವಾಕೃತಿಗಳ ವಿಶಿಷ್ಟ ಪ್ರಕಾರವಾಗಲಿ ನಮ್ಮ ವಿದ್ಯಾವಂತ ಜನಕ್ಕೆ ಅಷ್ಟಾಗಿ ಹಿಡಿಸಿರಲಿಲ್ಲ. ಅದರಲ್ಲಿಯೂ ಸ್ತ್ರೀವ್ಯಕ್ತಿಗಳ ಆಕೃತಿಗಳ ಬಗೆಗೆ ಕೆಲವರಂತೂ ಹಾಸ್ಯ ಮಾಡುತ್ತಿದ್ದುದೂ ಉಂಟು. ಹೆಂಗಸರು ಕ್ಷಯರೋಗಪೀಡಿತರಂತೆ ಕಾಣುತ್ತಿದ್ದರು. ಅವರಿಗೆ, ಚಿತ್ರಗಳಲ್ಲಿ ಕೈಬೆರಳುಗಳನ್ನು ಬೆಂಡೇಕಾಯಿ ಬೆರಳು ಎಂದು ಹಾಸ್ಯಮಾಡುತ್ತಿದ್ದರು.

ರವಿವರ್ಮನ ವಾಸ್ತವ ಸಂಪ್ರದಾಯದ ಚಿತ್ರಗಳ ಪ್ರಭಾವದಿಂದ ಬಿಡಿಸಿಕೊಂಡು ಚಿತ್ರಕಲೆಯ ಪ್ರಪಂಚದ ಹೊಸ ಪ್ರಯೋಗಗಳನ್ನು ಸಹಾನುಭೂತಿಯ ದೃಷ್ಟಿಯಿಂದ ಸ್ವೀಕರಿಸುವುದು ನಮ್ಮ ಜನಕ್ಕೆ ಇನ್ನೂ ಸಾಧ್ಯವಾಗಿರಲಿಲ್ಲ. ಆದರೆ, ಕಸಿನ್ಸ್ ಅವರ ಸೋದಾಹರಣ ಉಪನ್ಯಾಸವನ್ನು ಕೇಳಿದ ಮೇಲೆ ತಮ್ಮ ಅಭಿಪ್ರಾಯಗಳನ್ನು ಸ್ವಲ್ಪಮಟ್ಟಿಗಾದರೂ ಬದಲಾಯಿಸಿಕೊಂಡಿದ್ದುದರಲ್ಲಿ ಸಂದೇಹವಿಲ್ಲ. ಏಕೆಂದರೆ, ಪ್ರದರ್ಶನ ನೋಡಿದವರು ವಂಗ ಸಂಪ್ರದಾಯದ ಚಿತ್ರಗಳನ್ನು ಸಹಾನುಭೂತಿಯಿಂದ ನೋಡಿ, ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದುದು ಕಂಡು ಬರುತ್ತಿತ್ತು. ವಿಶೇಷವಾಗಿ 'ಚಂದ್ರಶೇಖರ್' ಎಂಬ ಶಿವನ ಎದೆಮಟ್ಟದ ಚಿತ್ರ ಎಲ್ಲರ ಮೆಚ್ಚುಗೆ ಪಡೆದಿತ್ತು. ವೆಂಕಟಪ್ಪನವರು ತಮ್ಮ ಚಿತ್ರಗಳ ಪರಿಚಯವನ್ನು ಆಗಲೇ ಆಪ್ತರಾಗಿಬಿಟ್ಟಿದ್ದ ವೆಂಕಣ್ಣನವರಿಗೆ ಮಾಡಿಕೊಡುತ್ತಿದ್ದರು. ಲೆನ್ಸನ್ನು ಅವರ ಕೈಗೆಕೊಟ್ಟು ಉಷ್ಟ್ರಪಕ್ಷಿಯ ತುಪ್ಪುಳವನ್ನು ಸೂಕ್ಷ್ಮ ಕುಂಚಗೆಲಸದ ರೇಖೆಗಳಿಂದ ಬಿಡಿಸಿರುವುದನ್ನು ಗಮನಿಸಿರಿ ಎಂದು ತಿಳಿಯಹೇಳುತ್ತಿದ್ದರು. ಅವರ ಧ್ವನಿಯಲ್ಲಿ ಹೆಮ್ಮೆಯಾಗಲಿ ಗರ್ವವಾಗಲಿ ಪ್ರತಿಷ್ಠೆಯಾಗಲಿ ಇದ್ದಂತೆ ಕಂಡುಬರಲಿಲ್ಲ; ತಮ್ಮ ಕಲೆಯ ಸ್ವರೂಪವನ್ನು ವೀಕ್ಷಕರು ಅರಿತು, ಪ್ರದರ್ಶನದಲ್ಲಿಯ ಇತರ



ಪಕ್ಷಿ, ಬಂಗಲಿ ಶೈಲಿ A study

ಚಿತ್ರಗಳೊಂದಿಗೆ ಹೋಲಿಸಿ ನೋಡಿ, ಅವರ ವೈಶಿಷ್ಟ್ಯವನ್ನು ಗುರುತಿಸಿಕೊಳ್ಳಬೇಕೆಂಬುದೇ ಅವರ ಅಪೇಕ್ಷೆಯಾಗಿತ್ತು. ಅವರ ವಿವರಣೆಯ ಬೆಳಕಿನಲ್ಲಿ, ಉದಕಮಂಡಲದ ಭೂದೃಶ್ಯಚಿತ್ರಗಳು ಲೆನ್ಸ್‌ಮೂಲಕ ನೋಡಿದಾಗ ಸೂಕ್ಷ್ಮವಿವರಗಳನ್ನು ತೆರೆದು ತೋರಿಸುತ್ತಿದ್ದವು; ದೂರನೋಟಕ್ಕೆ 'ಇಂಪ್ರೆಷನಿಸ್ಟ್' ಮಾದರಿಯ ಚಿತ್ರಗಳಿಗಿಂತಲೂ ಹೆಚ್ಚು ಪರಿಣಾಮಕಾರಿಯಾಗಿ ಒಪ್ಪಂದವನ್ನು ಮನಮುಟ್ಟಿಸುತ್ತಿದ್ದವು.

'ಚಂದ್ರಶೇಖರ' ಚಿತ್ರ ವೆಂಕಟಪ್ಪನವರ ಮೆಚ್ಚುಗೆಗೂ ಪಾತ್ರವಾಗಿತ್ತು. ನೀಲವರ್ಣವನ್ನು ಬೇರೆ ಬೇರೆ ಮಟ್ಟದ ಸಾಂದ್ರತೆಯಲ್ಲಿ ರಚಿಸಿದ ಏಕವರ್ಣಚಿತ್ರ ಅದು. ಶಿವನ ಜಡೆಮುಡಿಯನ್ನು ಅಲಂಕರಿಸಿದ್ದ ಬಾಲಚಂದ್ರನ ಬೆಳ್ಳಿಬಿಳುಪನ್ನು ಆ ಎಡೆಯಲ್ಲಿ ಬಿಳಿಯ ಕಾಗದವನ್ನೇ ಎಷ್ಟು ಬೇಕೋ ಅಷ್ಟು ಮಾತ್ರ ಉಳಿಸಿಕೊಂಡು ಬಣ್ಣವನ್ನು ಕುಸುವೂ ಸೋಕಿಸದೆ ತೆರಪು ಬಿಡುವುದರಿಂದ ಕಾಣಿಸಲಾಗಿದೆ ಎಂದು ವೆಂಕಟಪ್ಪ ವಿವರಿಸಿದರು. ಊಟಿ ದೃಶ್ಯಗಳಲ್ಲಿ ಬಿಳಿಮೋಡಗಳ ನಿರ್ಮಾಣಕ್ಕೂ ತಾವು ಇದೇ ವಿಧಾನವನ್ನು ಅನುಸರಿಸಿರುವುದಾಗಿಯೂ, ಈ ಪರಿಣಾಮ ಸಾಧನೆಗೆ ಬಹಳ ತಾಳ್ಮೆ ಅಗತ್ಯವೆಂದೂ ತಿಳಿಸಿದರು. ಈ ತಾಳ್ಮೆ ಇಲ್ಲದವರು (ಮುಖ್ಯವಾಗಿ ಇಂಪ್ರೆಷನಿಷ್ಟ ಸಂಪ್ರದಾಯದವರು) ಬಿಳಿಯ ಬಣ್ಣವನ್ನೇ ಉಪಯೋಗಿಸಿಬಿಡುತ್ತಾರೆ. ತೈಲವರ್ಣ, ಟೆಂಪೆರಾವರ್ಣ, ಚಿತ್ರರಚನೆಯಲ್ಲಂತೂ ಇದು ಸರ್ವಸಾಮಾನ್ಯ ಎಂಬುದು ಅವರ ಅಭಿಪ್ರಾಯವಾಗಿತ್ತು.ಅವರ ಈ ವಿವರಣೆ ನನ್ನ ಪಾಲಿಗೆ ಕಲಾಶಿಕ್ಷಣವೇ ಆಗಿತ್ತು.

ಆ ಪ್ರದರ್ಶನದಲ್ಲಿ ನನ್ನ ಗಮನವನ್ನು ಸೆಳೆದ, ನನ್ನ ನೆನಪಿನಲ್ಲಿ ಇಂದಿಗೂ ಹಸಿರಾಗಿಯೇ ಉಳಿದಿರುವ, ಒಂದು ಚಿತ್ರದ ಬಗೆಗೆ ಇಲ್ಲಿ ಪ್ರಸ್ತಾಪಿಸದಿದ್ದರೆ ವೆಂಕಟಪ್ಪನವರ ಕಲಾಸಂಪ್ರದಾಯದ ಬಗೆಗೆ ನನ್ನಗ್ರಹಿಕೆಯನ್ನು ಪೂರ್ತಿಯಾಗಿ ತಿಳಿಸಿದ್ದಂತೆ ಆಗುವುದಿಲ್ಲ. ಈ ಹಿಂದೆಯೇ ಹೆಸರಿಸಿರುವ 'ಮಹಾಶಿವರಾತ್ರಿ' ಯೇ ಆ ಚಿತ್ರ. ಈ ಮೊದಲೇ ಉಲ್ಲೇಖಿಸಿರುವಂತೆ, ಸಾಹಿತ್ಯ ಮತ್ತು ಚಿತ್ರಕಲೆಯ ವಿಷಯವಾಗಿ ನಾನು ಬರೆದ ಪ್ರಬಂಧವೊಂದರಲ್ಲಿ ಆ ಚಿತ್ರದ ಮಹತ್ವ ಏನು ಎಂಬುದನ್ನು ವರ್ಣಿಸಿದ್ದೇನೆ. ಅಂದು ನಾನು ವ್ಯಕ್ತಪಡಿಸಿದ ಅಭಿಪ್ರಾಯವನ್ನು ಇಂದು ನಾನು ಬದಲಾಯಿಸಿಕೊಳ್ಳಲು ಕಾರಣವೇನೂ ಇಲ್ಲದಿರುವುದರಿಂದ ಪ್ರಬಂಧದಲ್ಲಿಯ ಪ್ರಸಕ್ತಭಾಗವನ್ನು ಇಲ್ಲಿ ಎತ್ತಿಬರೆಯುತ್ತಿದ್ದೇನೆ.

"ಮಹಾಶಿವರಾತ್ರಿ" ಯ ವಿಷಯವನ್ನೇ ಒಳಗೊಂಡ ರವಿವರ್ಮರ ಚಿತ್ರವೊಂದಿದೆ. ಅದರ ವಿಷಯವಾಗಿ ಒಂದೆರಡು ಮಾತನ್ನು ಹೇಳಿದರೆ ವೆಂಕಟಪ್ಪನವರ ಚಿತ್ರದ ಮಹತ್ವವು ಗೊತ್ತಾಗುವುದು.

"ರವಿವರ್ಮರ" ಚಿತ್ರದಲ್ಲಿ ಒಬ್ಬ ಯುವತಿ-ಸುಂದರಿ, ಭಕ್ತಳು, ಒಂದು ದೇವಸ್ಥಾನವನ್ನು ಪ್ರವೇಶಿಸುತ್ತಿದ್ದಾಳೆ. ಅವಳ ನಿಲುವಿನ ಭಂಗಿ, ನಮ್ಮಕಡೆಗೆ ನಟ್ಟಿರುವ ನೋಟ, ಇವನ್ನು ನೋಡಿದರೆ ಅವಳ ಕಾರ್ಯವು ದೇವಸ್ಥಾನಕ್ಕೆ ಹೋಗುವುದಲ್ಲವೆಂದು ಶಂಕೆಯಾಗುತ್ತದೆ. ಅಲ್ಲದೆ, ಈಶ್ವರನ ಗುಡಿಯಲ್ಲಿರಬೇಕಾದ (ಬಸವ) ನಂದಿ ಒಂದನ್ನು ಬಿಟ್ಟರೆ, ದೇವಸ್ಥಾನವು ದೇವಸ್ಥಾನದಂತೆಯೇ ಕಾಣುವುದಿಲ್ಲ. ಅಲ್ಲದೇ, ಶಿವನು ಬಹಳ ಪುಣ್ಯ ಮಾಡಿದ್ದ ! ಗುಡಿಯ ಮುಂದೆ, ಈಗಿನ ಕಾಲದ ಬಂಗಲೆಗಳ ಮುಂದೆ ಹಬ್ಬಿಸಿರುವಂತೆ, ಒಂದು ಗುಲಾಬಿಯ ಗಿಡ ಬೇರೆ ಹಬ್ಬಿದೆ! ಆ ಚಿತ್ರದಲ್ಲಿ ಸಾಕ್ಷಾತ್ಕರಣವೆನ್ನುವುದು ಎಳ್ಳಷ್ಟೂ ಇಲ್ಲ. ಆ ಚಿತ್ರದಲ್ಲಿ ಬಸವಣ್ಣನೊಬ್ಬನಿಲ್ಲದೇ ಹೋದರೆ — ಆ ನಾರೀಮಣಿ ಯಾರ ಮನೆಗೋ ವೈಯಾರದಿಂದ ಎಳ್ಳುಬೀರುವುದಕ್ಕೆ ಹೋಗುತ್ತಿಯರುವಂತೆ ಕಾಣುತ್ತದೆ!

ವೆಂಕಟಪ್ಪನವರ ಚಿತ್ರವನ್ನು ತೆಗೆದುಕೊಳ್ಳಿ. ಕಂಬಸಾಲಿನ ದೇವಸ್ಥಾನ! ದೇವಸ್ಥಾನದ ಮುಂಬಾಗಿಲಿನ ಸುತ್ತಲೂ ಗೂಡುಗಳಲ್ಲಿ ಹೊತ್ತಿಸಿಟ್ಟಿರುವ ಹಣತೆಯ ಕುಡಿದೀಪಗಳು, ಬರಿಯ ದೀಪಗಳಲ್ಲ, 'ಉರಿಯುತ್ತಿರುವ' ದೀಪಗಳು। ದೀಪದ ಪ್ರಭೆ ಗೂಡಿನಲ್ಲೆಲ್ಲಾ ತುಂಬಿ ತುಳುಕಿ ಹೊರಗೆ ಹರಿಯುತ್ತಿದೆ. ಆದರೂ ಹಣತೆಯ ದೀಪ, ಹೆಚ್ಚು ಪ್ರಕಾಶವಿಲ್ಲ, ಸ್ವಲ್ಪ ದೂರದಲ್ಲಿ, ದೇಗುಲದ ಮುಂದುಗಡೆ, ಅಶ್ವತ್ಥವೃಕ್ಷವೊಂದು ಮಸಕು ಮಸಕಾಗಿ ಕಾಣುತ್ತಿದೆ. ಈ ದೃಶ್ಯದ ಬಣ್ಣಕೌಶಲವನ್ನು ಮನಗಾಣಬೇಕಾದರೆ ಮೂಲ ಪ್ರತಿಯನ್ನೇ ನೋಡಬೇಕು. ಈಚೆಗೆ 'ರಂಗಭೂಮಿ' ಯಲ್ಲಿ ನರಳುತ್ತಾ ಬಿದ್ದಿರುವ ಛಿದ್ರ ಛಿದ್ರ ಪ್ರತಿಯನ್ನು ನೋಡಿದರೆ ಗೊತ್ತಾಗುವುದಿಲ್ಲ. ಆ ಚಿತ್ರದ ಬಣ್ಣಗೆಲಸವು ಅಷ್ಟು ಮನೋಹರವಾಗಿದ್ದರೂ ಚಿತ್ರದ ಸೌಂದರ್ಯವು ಬರಿಯ ಬಣ್ಣಗೆಲಸದಲ್ಲಿಲ್ಲ. ಇನ್ನೆಲ್ಲಿದೆ? ಒಬ್ಬಳು ಯುವತಿ, ಪೂಜಾ ಸಾಮಗ್ರಿಯೊಡನೆ

ದೇವಸ್ಥಾನವನ್ನು ಪ್ರವೇಶಿಸುತ್ತಿದ್ದಾಳೆ. ಗಂಭೀರವಾದ, ಆದರೂ ಭಕ್ತಿಯುತವಾದ ಅವಳ ಮುಖಭಾವವು ಹಣತೆಯ ದೀಪದ ಬೆಳಕಿನಲ್ಲಿ ಎಷ್ಟು ವಿಶದವಾಗಿ ಪ್ರಕಾಶಿಸುತ್ತಿದೆ! ಇನ್ನು ಸ್ವಲ್ಪ ದೂರದಲ್ಲಿ ಒಬ್ಬ ದೃಢಕಾಯನು ಸಾಷ್ಟಾಂಗ ಪ್ರಣಾಮ ಮಾಡುತ್ತಿದ್ದಾನೆ!

ಹೀಗೆ ಚಿತ್ರದಲ್ಲಿ ಇಬ್ಬರು ಭಕ್ತಶಿರೋಮಣಿಗಳು. ಈ ವ್ಯಕ್ತಿಗಳ ಚಿತ್ರದಲ್ಲೂ ಅಲ್ಲ ಸೌಂದರ್ಯವಿರುವುದು. ಅಲ್ಪವಾದ ಹಣತೆಯ ದೀಪದ ಅಗಾಧವಾದ ಜ್ಯೋತಿಯಲ್ಲಿ ಪೂರ್ಣ ಭಕ್ತಿಭಾವವು ಹೇಗೆ ಮಿಳಿತವಾಗಿದೆ! ಈ ಸಮ್ಮಿಳನದಲ್ಲಿಯೇ ಚಿತ್ರದ ಎಲ್ಲಾ ಸೌಂದರ್ಯ; ಈ ಸಮ್ಮಿಳನ ಪ್ರಕಾಶದಲ್ಲಿಯೇ ಚಿತ್ರಗಾರರ ವ್ಯಕ್ತಿತ್ವ ಪ್ರಕಾಶ; ಈ ಸಮ್ಮಿಳನದಲ್ಲಿಯೇ ಚಿತ್ರಗಾರರ ಕಲ್ಪನಾಶಕ್ತಿ, ಊಹಾಶಕ್ತಿ, ಬುದ್ಧಿಶಕ್ತಿ, ಆತ್ಮಶಕ್ತಿ ಇವೆಲ್ಲದರ ಅಡಕ! ಅತುಳ ಭಕ್ತಿಯೇ ಮೂರ್ತಿವೆತ್ತಂತಿದೆ — ಈ ಚಿತ್ರ! ಇದು ಭಕ್ತಿಭಾವದ ಚಿತ್ರವಲ್ಲ. ಭಕ್ತಿಭಾವದ ಪ್ರಪಂಚ! ಇಂತು ಈ ಚಿತ್ರವು ಶ್ರೇಷ್ಠ ಕಲೆಗೆ ಆದರ್ಶಪ್ರಾಯವಾದುದು.

ಈ ಹಿನ್ನೆಲೆಯಲ್ಲಿ ನನ್ನನ್ನು ನಿಮ್ಮ ಶಿಷ್ಯನನ್ನಾಗಿ ಸ್ವಿಕರಿಸಿ ಎಂದು ಕೇಳಿಕೊಳ್ಳಲು ವೆಂಕಟಪ್ಪನವರನ್ನು ಕಾಣಲು ಅವರಿದ್ದ ಸ್ಥಳಕ್ಕೆ ಹೋದೆ. ನನಗೆ ಅವರ ಚಿತ್ರಗಳ ಕಲೆಯ ಮಹತ್ವದ ಸ್ಥೂಲ ಪರಿಚಯ ಆಗಿತ್ತಷ್ಟೆ; ನನ್ನ ಚಿತ್ರಕಲಾಭ್ಯಾಸದ ಮಾದರಿಗಳನ್ನು ಅವರೂ ನೋಡಿದ್ದಾರೆ ಎಂಬ ನೆನಪಿನ ಬೆಂಬಲವೂ ಇತ್ತು. ಮೈಸೂರಿನ ಹಳೇ ಅಗ್ರಹಾರದ ಅಂಗಡಿ ಬೀದಿಯ ಉತ್ತರ ದಿಕ್ಕಿನ ಕೊನೆಯಲ್ಲಿ, ಎಡಕ್ಕೆ ಹಾದುಹೋಗುವ ಕತ್ವಾಡಿಪುರದ ಅಗ್ರಹಾರ ಎಂಬ ಮೂರು ಬೀದಿಗಳು ಈಗಲೂ ಇವೆ. ಇವುಗಳ ಎದುರುಗಡೆ ಗೋಪಾಲಕೃಷ್ಣಸ್ವಾಮಿ ದೇವಸ್ಥಾನ. ಅದರ ಎಡಕ್ಕೆ ಸ್ವಲ್ಪ ಈಚೆ, ದಕ್ಷಿಣಕ್ಕೆ ಸ್ವಲ್ಪ ದೊಡ್ಡದಾದ ನಿವೇಶನದ ನಡುವೆ ಒಂದು ಹಳೆಯ ಬಂಗಲಿ ಮನೆ ಇದ್ದಿತು. ಸ್ವಲ್ಪ ಪಾಳುಬಿದ್ದಿತ್ತು ಎಂದರೂ ನಡೆಯುತ್ತದೆ. ಅದರಲ್ಲಿ ವೆಂಕಟಪ್ಪನವರ ವಾಸ. ಅದೇ ಅವರ ಸ್ಟುಡಿಯೋ ಕೂಡ.

ಅವರನ್ನು ಕಾಣಲು ಹೋದಾಗ ನಾನು ಇಂಟರ್‌ಮೀಡಿಯಟ್ ಪರೀಕ್ಷೆಗೆ ಕುಳಿತಿದ್ದೆ. ಆಗ ನನಗೆ ಬೇಸಿಗೆ ಕಾಲದ ರಜಾ. ನಾನು ವೆಂಕಟಪ್ಪನವರನ್ನು ಕಾಣಲು ಕಾಂಪೌಂಡ್ ಗೇಟನ್ನು ತೆರೆದುಕೊಂಡು ಹೋದಾಗ ಕಟ್ಟಡದ ಮುಂಭಾಗದ ಬಯಲು ಜಾಗದಲ್ಲಿ ಅವರು ಅಡ್ಡಾಡುತ್ತಿದ್ದರು. ಪೂರ್ವಭಾವಿ ಪರಿಚಯದ ಪ್ರಶ್ನೋತ್ತರಗಳು ಮುಗಿದ ಮೇಲೆ, ವೆಂಕಣ್ಣನವರ ಶಿಫಾರಸ್ಸಿನ ಹಿನ್ನೆಲೆಯನ್ನು ಬಹಳ ಸಲಿಗೆಯಿಂದಲೇ ನನ್ನೊಡನೆ ಮಾತಾಡಿದರು. ಕೆಲವು ಷರತ್ತುಗಳನ್ನು ಹಾಕಿ, ನನ್ನನ್ನು ಶಿಷ್ಯನಾಗಿ ಸ್ವೀಕರಿಸಲು ಒಪ್ಪಿಕೊಂಡರು. ನಾನು ಚಿತ್ರಕಲಾಭ್ಯಾಸದಲ್ಲಿ ತಕ್ಕಮಟ್ಟಿಗೆ ಮುಂದುವರಿದಿರುವುದನ್ನು ಒಪ್ಪಿಕೊಂಡರೂ, ತಮ್ಮಲ್ಲಿ ಕಲಿಯಬೇಕಾದರೆ ಮೊದಲಿನಿಂದಲೂ — ಎಂದರೆ ಸರಳರೇಖೆಗಳನ್ನು ಅಡ್ಡನಾಗಿ, ಉದ್ದವಾಗಿ, ಓರೆಯಾಗಿ ಹಾಗೆ ಹೀಗೆ ನಾನಾಕೋನಗಳಲ್ಲಿ ಎಳೆಯುವುದು, ಇತ್ಯಾದಿ ಚಿತ್ರಕಲೆಯ 'ಓನಾಮ' ಅಥವಾ 'ಎ ಬಿ ಸಿ' ಯ ಪ್ರಾರಂಭ ಹಂತದಿಂದ ಕಲಿಕೆ ಶುರುಮಾಡಬೇಕು ಎಂದು ವಿಧಿಸಿದರು. ಅವರ ಷರತ್ತಿಗೆ ಒಪ್ಪಿ, ಬೇಸಗೆ ಪೂರ್ತಿ ಗೆರೆ ಎಳೆದದ್ದಾಯಿತು. ಮುಂದೆ ಏನು ಮಾಡಬೇಕು? ನನ್ನ ಪ್ರಶ್ನೆಗೆ ಅವರ ಉತ್ತರ: ಇಂಟರ್‌ಮೀಡಿಯಟ್ ಓದು ಸಾಕು. ಕಾಲವನ್ನೆಲ್ಲಾ ಚಿತ್ರ ಕಲಾಭ್ಯಾಸಕ್ಕೇ ಮೀಸಲಿಡಬೇಕು. ನನ್ನ ತಂದೆ ತಾಯಿಗಳಿಗೋ, ನಾನು ಗ್ರಾಜ್ಯುಯೇಟ್ ಆಗಬೇಕೆಂಬ ಹೆಬ್ಬಯಕೆ. ನಾನು ಹಿಂದೆ ಮುಂದೆ ನೋಡಿ, ಅವರಿಗೆ ನಿರಾಶೆಯಾದರೂ ಚಿಂತೆಯಿಲ್ಲ ಎಂದು ನಿರ್ಧರಿಸಿ, ಈ ಷರತ್ತಿಗೂ ಒಪ್ಪಿಕೊಂಡೆ. ಅನಂತರ, ಬ್ಲ್ಯಾಕಿ ಅಂಡ್ ಸನ್ಸ್ ಅವರು ಸಿದ್ಧಪಡಿಸಿದ್ದ ಗ್ರೇಡೆಡ್ ಡ್ರಾಯಿಂಗ್ ಪುಸ್ತಕಗಳನ್ನು ತರಿಸಿಕೊಂಡು, ಅವುಗಳಲ್ಲಿಯ ಮಾದರಿ ಚಿತ್ರಗಳ ಪ್ರಕಾರ ಅಭ್ಯಾಸ ಮುಂದುವರಿಸಬೇಕೆಂದು ಗುರುಗಳ ಅಪ್ಪಣೆ ಆಯಿತು.

ಶಿಷ್ಯದೀಕ್ಷೆ ಪಡೆದ ನಾನು ಆ ಪುಸ್ತಕಗಳನ್ನು ತರಿಸಿಕೊಂಡು ಹೆಚ್ಚಿನ ಮಾರ್ಗದರ್ಶನಕ್ಕೆ ಗುರುಗಳನ್ನು ಸಂದರ್ಶಿಸಿದಾಗ, ಕಡೆಗೊಬ್ಬ ಶಿಷ್ಯ ದೊರಕಿದ್ದಕ್ಕೆ ಸಂತೋಷವಾಗಿರಬೇಕು ಎಂದು ಕಾಣುತ್ತದೆ, ಸಾಧಾರಣವಾಗಿ ಗಂಭೀರವಾಗಿಯೇ ಇರುತ್ತಿದ್ದ ಮುಖದ ಮೇಲೆ ಮಂದಹಾಸವನ್ನು ಸೂಸಿ, ''ಪರವಾಗಿಲ್ಲ, ನಿನ್ನಲ್ಲಿ ಸ್ವಲ್ಪ ಹಟ ಸ್ವಭಾವ ಇರುವ ಹಾಗೆ ಕಾಣುತ್ತೆ. ಛಲ ಇಲ್ಲದಿದ್ದರೆ ಏನೂ ಸಾಧಿಸೋದಕ್ಕೆ

ಆಗೋದಿಲ್ಲ. ಅದಿರಲಿ, ನಿನಗೆ ಮದುವೆ ಆಗಿದೆಯೋ'' ಎಂದು ಪ್ರಶ್ನಿಸಿದರು. ನಾನು ಈ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲ. ಆದರೆ, ಅವರು ಕೇಳಿದ್ದು ಸೋಜಿಗದ ಪ್ರಶ್ನೆಯೂ ಆಗಿರಲಿಲ್ಲ. ಆಗಿನ ದಿನಗಳಲ್ಲಿ 16-17ರ ಪ್ರಾಯಕ್ಕೆ ಗಂಡು ಮಕ್ಕಳಿಗೆ ಮದುವೆ ಮಾಡಿಬಿಡುವುದು ಅಪರೂಪದ ಸಂಗತಿಯಾಗಿರಲಿಲ್ಲ. ಉತ್ತರ ಹೇಳಲು ತಡೆದು, ತಡವರಿಸುತ್ತ, ''ಆಗಿದೆ'' ಎಂದೆ. ''ಹಾಗಿದ್ದ ಪಕ್ಷದಲ್ಲಿ, ನಾಳೆಯಿಂದ ಕಲಾಶಿಕ್ಷಣಕ್ಕೆ ನನ್ನ ಹತ್ತಿರಕ್ಕೆ ಬರಬೇಕಾದ್ದಿಲ್ಲ'' ಎಂದು ಸ್ವಲ್ಪ ಗಡುಸಾಗಿಯೇ ಉತ್ತರಕೊಟ್ಟರು. ಏನು ಹೇಳುವುದಕ್ಕೂ ತೋಚದೆ ಮೌನವಾಗಿದ್ದೆ. ಅವರು ಮುಂದುವರಿಸಿದರು: ''ನೋಡು, ಯಾರಯಾರದೋ ಶಿಫಾರಸ್ಸು ತಂದು ಆಂಧ್ರದವನು ಒಬ್ಬ ಬಂದಿದ್ದ. ನಿನಗಿಂತ ಸ್ವಲ್ಪ ದೊಡ್ಡವನು. ನಿನ್ನಹಾಗೆ ಮೊದಲಿನಿಂದಲೂ ಕಲಿಯಲೂ ಆತ ಸಿದ್ಧನಾಗಿರಲಿಲ್ಲ. ಹೋಗಲಿ ಎಂದು ರಿಯಾಯಿತಿ ತೋರಿಸಿ ಸುಮ್ಮನಿದ್ದೆ. ಏನೇನೋ ಚಿತ್ರಿಸಿದ್ದನ್ನು ತಂದುತೋರಿಸುತ್ತಿದ್ದ. ಒಂದು ದಿನ ನಿನ್ನನ್ನು ಕೇಳಿದ ಹಾಗೆಯೇ ಮದುವೆ ಆಗಿದೆಯೇ ಎಂದು ಕೇಳಿದೆ. ಇಲ್ಲ ಎಂದು ಹೇಳಿದ್ದ. ಆಮೇಲೆ ಗೊತ್ತಾಯಿತು, ಆತನಿಗೆ ಮದುವೆ ಆಗಿದೆ ಅಂತ. ಸುಳ್ಳುಬೊಗಳಿದ್ದ. 'ಸುಳ್ಳು ಬೇರೆ ಹೇಳಿದ್ದೀಯಾ? ನಾಳೆಯಿಂದ ಇಲ್ಲಿ ಸುಳಿಯಬೇಡ' ಅಂತ ಹೇಳಿಬಿಟ್ಟೆ. ಬರುವುದಕ್ಕೆ ಅವನಿಗೆ ಮುಖ ಇದ್ದರೆ ತಾನೆ? ನೀನು ನಿಜ ಹೇಳಿದ್ದೀಯೆ. ನನಗೆ ಸಂತೋಷವಾಗಿದೆ. ಆಗಾಗ್ಗೆ ನಮ್ಮ ಸ್ಟೂಡಿಯೋಕ್ಕೆ ಬಂದುಹೋಗುತ್ತ ಇರು. ನಾನು ಮಾಡಿದ ಕೆಲಸವನ್ನು ತೋರಿಸುತ್ತೇವೆ ....'' ಎಂದು ಹೇಳಿ, ಬೆನ್ನು ತಟ್ಟಿದರು.

ಇದು ಅವರು ನನಗೆ ತೋರಿಸಿದ ರಿಯಾಯತಿ! ಒಂದು ದಿನ, ಗೋಡೆಗೆ ಒರಗಿಸಿಟ್ಟ ಕೆಲವು ಜಲವರ್ಣ ಚಿತ್ರಗಳನ್ನು ತೋರಿಸಿದರು. ಅವುಗಳ ಪೈಕಿ, ಹಳೇ ಅಗ್ರಹಾರದ ನಾಡು ಹೆಂಚಿನ ಮನೆಯ ದೃಶ್ಯದ ಒಂದು ಚಿತ್ರ ನನ್ನ ಗಮನವನ್ನು ಸೆಳೆಯಿತು. ಕೆಲವು ಕಾಲದ ಮೇಲೆ, ಅದರ ಪ್ರಭಾವಕ್ಕೆ ಒಳಗಾಗಿ ನಮ್ಮ ಮನೆಯ ಮಾಳಿಗೆಯ ಮೇಲಿಂದ ಕಾಣುವಂತೆ ಎದುರು ಮನೆಯ ಮಹಡಿಯಭಾಗ, ಅದರ ಹಿಂಬದಿಯಲ್ಲಿ ಚಾಮುಂಡಿಬೆಟ್ಟಡದ ಮೇಲ್ಭಾಗ, ಅರಳಿಮರ, ಬಿಳಿಮೋಡ, ಆಡುವ ನೀಲಿಬಾನು — ಈ ದೃಶ್ಯದ ಜಲವರ್ಣ ಚಿತ್ರವನ್ನು ರಚಿಸಿದೆ. ಆದರೆ, ಅದನ್ನು ತೋರಿಸಲು ಮಾತ್ರ ಹಿಂದೆಗೆದೆ.

ಆಗಾಗ್ಗೆ ನನ್ನನ್ನು ಬಂದು ನೋಡುತ್ತಿರಬಹುದು ಎಂದು ಗುರುಗಳು ನನಗೆ ಅಪ್ಪಣೆಕೊಟ್ಟಿದ್ದರಷ್ಟೆ. ಅವರು ಮಹಾರಾಜರವರ ಆದೇಶದಂತೆ ನಿರ್ಮಾಣವಾಗುತ್ತಿದ್ದ ಹೊಸ ದರ್ಬಾರ್ ಸಭಾಂಗಣದ ಕೈಪಿಡಿಭತ್ತಿಗೆ ಪ್ಲಾಸ್ಟರ್ ಆಫ್ ಪ್ಯಾರಿಸ್ ಉಬ್ಬುಶಿಲ್ಪಗಳನ್ನು ಶಾಂತವಾತಾವರಣದಲ್ಲಿ ರಚಿಸಲು ಆಗ 'ಕೋಟೆ ಆಸ್ಪತ್ರೆ' ಎಂದು ಹೆಸರಾಗಿದ್ದ ಕಟ್ಟಡದ ಮಹಡಿಮೇಲೆ ಒಂದು ವಿಶಾಲವಾದ ಕೋಣೆಯನ್ನು ಬಿಟ್ಟುಕೊಟ್ಟಿದ್ದರು. ಉಬ್ಬುಶಿಲ್ಪ ಹೇಗೆ ಮಾಡುತ್ತಾರೆ ಎನ್ನುವುದನ್ನು ನೋಡಬೇಕೆಂದು ನನಗೆ ಬಲವಾದ ಅಪೇಕ್ಷೆ. ಮುಂದಾಗಿ ಅನುಜ್ಞೆ ಪಡೆದುಕೊಂಡು ಒಂದು ರಜಾದಿನದಂದು ಅವರಲ್ಲಿಗೆ ಹೋದೆ. ಅವರು ಒಂದು ವೀಣೆಯನ್ನು ಚಾಪೆಯ ಮೇಲೆ ಇಟ್ಟುಕೊಂಡು ಒಂದು 'ಕುದುರೆ' ಯನ್ನು ಜೋಡಿಸುತ್ತಿದ್ದರು. ನಮಸ್ಕಾರ ಮಾಡಿ, ದೂರದಲ್ಲಿ ಕುಳಿತೆ. ಕುದುರೆಯ ತಳಭಾಗವನ್ನು ಒಮ್ಮೆ, ಮೇಲ್ಭಾಗವನ್ನು ಒಮ್ಮೆ ಮರಳುಕಾಗದದಿಂದ ಉಜ್ಜಿ, ತಂತಿಗಳ ಕೆಳಗೆ ಕೂರಿಸಿ, ತಂತಿಗಳನ್ನು ಬಿರಡೆಗಳಿಂದ ಬಿಗಿಮಾಡಿ, ಮೀಟುಗಳನ್ನು ಹಾಕಿ ಶ್ರುತಿಮಾಡಿ ನೋಡಿ, ತೃಪ್ತಿಯಾಗದೆ, ಕುದುರೆಯನ್ನು ಕಳಚಿ ಮತ್ತೆ ಉಜ್ಜ ತೊಡಗಿದರು.

ಸುಮಾರು ಒಂದು ಗಂಟೆಯ ಕಾಲ ಈ ಪರೀಕ್ಷೆಯನ್ನು ಅನೇಕ ಸಲ ಮಾಡಿದ ಮೇಲೆ, ''ಈ ಕುದುರೆ ಸರಿಯಾಗಿ ಕೂರುವುದಿಲ್ಲ. ಮೊಂಡುತನ ಮಾಡುತ್ತಿದೆ. ನಾಥಕಟ್ಟೇ ಕೂಡಿಬರುತ್ತಿಲ್ಲ. ಎರಡು ಮೂರು ಕುದುರೆ ಪರೀಕ್ಷೆಮಾಡಿ ಆಯಿತು. ಅಗೋ ನೋಡಿ, ಪ್ಲ್ಯಾಸ್ಟರ್ ಆಫ್ ಪ್ಯಾರಿಸ್ ಕೆಲಸಕ್ಕೆ ರಜಾ ಕೊಟ್ಟುಬಿಟ್ಟಿದ್ದೇನೆ'' ಎಂದು ನನ್ನ ಕಡೆ ನೋಡಿದರು. ರೀಲೀಫ್ ಕಡೆತಿರುಗಿನೋಡಿದೆ. ಅದರ ಮೇಲೆ ಒದ್ದೆಯ ಬಟ್ಟೆ! ''ಸ್ವಲ್ಪ ವಿಶ್ರಾಂತಿ ತೆಗೆದು ಕೊಳ್ಳುತ್ತೇನೆ. ನೀವು ಹೋಗಿ. ಒಂದು ತಿಂಗಳು ಬಿಟ್ಟುಬನ್ನಿ'' ಎಂದರು. ದಟ್ಟಿಪಂಚೆ ಉಟ್ಟಿದ್ದರು. ಮೈಮೇಲೆ ಒಂದು ಟವಲು ಎಳೆದುಕೊಂಡು ವೀಣೆಯ ಪಕ್ಕದಲ್ಲಿ ಚಾಪೆಯಮೇಲೆ ಉರುಳಿದರು. ಅವರ ಬರಿಮೈ ನೋಡಿದೆ. ಎಂಥ ಮೈಕಟ್ಟು! 'ವೀಣೆಯ ಹುಚ್ಚು' ಚಿತ್ರದ ಕಲಾವಿದನ ಮೈಕಟ್ಟು ನೆನಪಾಯಿತು. ತುಸು ಕಂದು ಛಾಯೆಯ ಹಳದಿತಿರುಗಿದ ದಂತದ ಮೈಬಣ್ಣ. ಕಣ್ಣು ಮುಚ್ಚಿದ್ದೆ ತಡ,

ಸಣ್ಣ ಗೊರಕೆ. ಬೇಸಗೆಯ ಬಳಲಿಕೆ ಎಂದುಕೊಂಡೆ. ನಿದ್ರೆ ಅವರ ಅಜ್ಞಾಧೀನವಾಗಿತ್ತು ಎಂದು ತೋರುತ್ತೆ ಈಗ.

ಈ ಸಂಗತಿಯನ್ನು ತಿಳಿಸಿದ್ದರ ಉದ್ದೇಶ, ವೀಣೆಗೆ ಒಂದು ಕುದುರೆ ಕೂರಿಸುವುದರಲ್ಲಿಯೆ ಇಷ್ಟೊಂದು ಛಲವಂತಿಕೆಯನ್ನೂ ತನ್ಮಯತೆಯನ್ನೂ ತಳೆದ ವ್ಯಕ್ತಿ ಚಿತ್ರಕಲಾರಚನೆಯಲ್ಲೂ ವೀಣಾಸಾಧಕದಲ್ಲೂ ಇಟ್ಟುಕೊಂಡಿದ್ದ ಪಕಾಂತ ಸಿಷ್ಠೆ ಸಿಜವಾಗಿ ಒಂದು ಕಲಾತಪಸ್ಸು ಎಂದು ತಿಳಿಸುವುದು. ಕರ್ನಾಟಕದ ಕಲಾವಿದರಲ್ಲಿ ವೆಂಕಟಪ್ಪನವರು ಒಬ್ಬ ಕಲಾತಪಸ್ವಿ.

ಸರಿಯಾಗಿ ಒಂದು ತಿಂಗಳು ಬಿಟ್ಟು ಅವರ ಹಂಗಾಮಿ ಸ್ಟುಡಿಯೋಗೆ ಹೋದೆ. ಮತ್ತೆ ಅದೇ ದೃಶ್ಯ. ಕುದುರೆ ಇನ್ನೂ ಸರಿಯಾಗಿ ಕೂತಿರಲಿಲ್ಲ . ಅರ್ಧಾಂತಕವಾದ ಪ್ಲಾಸ್ಟರ್ ಆಫ್ ಪ್ಯಾರಿಸ್ ಶಿಲ್ಪದ ಮೇಲೆ ಒದ್ದೆಯ ಬಟ್ಟೆ . ಆ ಸ್ಥಳದಲ್ಲಿ , ಅದೇ ಕೊನೆಯ ಗುರುದರ್ಶನ.. ಆದರೆ, ನನ್ನ ಕಾಲೇಜು ಶಿಕ್ಷಣ ಮುಗಿಯುವವರೆಗೂ ಕಾಲೇಜು ಆವರಣದಲ್ಲಿ , ಮುಖ್ಯವಾಗಿ ಕಾಲೇಜು ಯೂನಿಯನ್ನಿನ ಎದುರಿನ ರಾಮಯ್ಯರ್ ಹೋಟೆಲಿನಲ್ಲಿ ಸಾಧಾರಣವಾಗಿ ಕಾಣಸಿಕ್ಕುತ್ತಿದ್ದರು. ಈ ಕಲಾತಪಸ್ವಿಗೆ ಮಸಾಲೆ ದೋಸೆ ಎಂದರೆ ಪಂಚಪ್ರಾಣ!

# ಕುಂಚದೊಂದಿಗೇ ಹುಟ್ಟಿದನೋ ಈ ಕಲಾವಿದ?

ಸಿ. ನಿಜಲಿಂಗಪ್ಪ

ನಾನು ಸೆಂಟ್ರಲ್ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ "ಪ್ರಬುದ್ಧ ಕರ್ನಾಟಕ" ದಲ್ಲಿ ವೆಂಕಟಪ್ಪನವರ ಒಂದು ಚಿತ್ರ ಪ್ರಕಟಿಸಲ್ಪಟ್ಟಿತ್ತು. ವೀಣೆಯನ್ನು ಪ್ರತಿನಿಧಿಸುವ ಸುಂದರ ಸ್ತ್ರೀ ಕಂಬಕ್ಕೆ ಕಟ್ಟಿ, ಚಿತ್ರ ಕಲೆಯನ್ನು ಪ್ರತಿನಿಧಿಸುವ ಮತ್ತೊಬ್ಬ ಸ್ತ್ರೀಗೆ ಪ್ರಾಮುಖ್ಯತೆ ಕೊಡಲಾಗಿತ್ತು.

ಅದು ಅರುವತ್ತು ವರ್ಷಗಳ ಮೇಲ್ಪಟ್ಟ ಮಾತು. ಆ ಚಿತ್ರ ಬರೆದವರು ಆಗ್ಯೆ ಆಗಲೇ ಹೆಸರುವಾಸಿಯಾಗಿದ್ದ ವೆಂಕಟಪ್ಪನವರು. ಅವರು ಎಲ್ಲಾ ಕಲೆಗಳಲ್ಲಿಯೂ ಎತ್ತಿದ ಕೈ. ಸಂಗೀತ ಬಿಟ್ಟು ಕುಂಚ ಹಿಡಿದ ಕಲಾವಿದನನ್ನು ತೋರಿಸುವ ಚಿತ್ರವದು. ವಿದ್ಯಾರ್ಥಿಗಳಿಗೆ ವೆಂಕಟಪ್ಪನವರ ಪರಿಚಯವಾದದ್ದು ಆಗ.

ಈಚೆಗೆ ನನ್ನ ವಿದ್ಯಾಭ್ಯಾಸ, ವಕೀಲಿ ವೃತ್ತಿ. ನಂತರ ಸ್ವತಂತ್ರ ಹೋರಾಟ, ಜೈಲು, ಪ್ರವಾಸಗಳು, ರಾಜಕೀಯ, ಕಾಂಗ್ರೆಸ್ ಕೆಲಸ, ಪಾರ್ಲಿಮೆಂಟ್, ಮುಖ್ಯಮಂತ್ರಿ ಕೆಲಸ, ಕಾಂಗ್ರೆಸ್ ಅಧ್ಯಕ್ಷತೆ ಇವುಗಳ ತೊಳಲಾಟದಲ್ಲಿ ಕಲೆ, ಸಾಹಿತ್ಯ ಮುಂತಾದವುಗಳ ಪರಿಚಯವೇ ಇಲ್ಲದಾಗಿತ್ತು. ಆದರೆ, ಮುಖ್ಯಮಂತ್ರಿ ಆದಾಗ ವೆಂಕಟಪ್ಪನವರನ್ನು ಗೌರವಿಸಬೇಕೆಂದು ಕರ್ನಾಟಕ ಸರ್ಕಾರ ನಿರ್ಧಾರ ಮಾಡಿ ಹೈದರಾಬಾದಿನ ಮಂತ್ರಿಗಳೂ, ಕಲಾಸಕ್ತರೂ, ಪೋಷಕರೂ, ಸಂಸ್ಕೃತಿಗಳ ಕೇಂದ್ರ ಸ್ಥಾನವಿದ್ದಂತೆ ಇದ್ದ ನವಾಬ್ ಯಾರ್‌ಜಂಗ್ ಅವರ ಮುಖಂಡತ್ವದಲ್ಲಿ ಸಮಾರಂಭ ಏರ್ಪಾಡಾಗಿತ್ತು. ವೆಂಕಟಪ್ಪನವರು ಅವರಿಗೆ ಒದಗಿದ್ದ ಚರ್ಮ ರೋಗದಿಂದ ಬಟ್ಟೆ ಹಾಕಿಕೊಳ್ಳುವುದೇ ಕಷ್ಟವಾಗಿತ್ತು. ಆದರೆ ನಮ್ಮ ಒತ್ತಾಯಕ್ಕೆ ಮಣಿದು ದಯಮಾಡಿ ಅವರು ಒಪ್ಪಿದರು. ಸಮಾರಂಭ ಅವರ ಮನೆಯಲ್ಲಿಯೇ ಬೆಂಗಳೂರಿನಲ್ಲಿ ಸರಳವಾಗಿ ನಡೆಯಿತು. ಅವರಿಗೆ ಮಾನಪತ್ರವನ್ನು ಅರ್ಪಿಸಿ, ಶಾಲು ಹೊದಿಸಿ ಗೌರವಿಸಿದೆವು. ಅವರ ಉತ್ತರವೂ ಅಷ್ಟೇ ಸರಳವಾಗಿತ್ತು. ಎಷ್ಟು ಸೂಕ್ತವೋ ಅಷ್ಟೇ ಗಾಂಭೀರ್ಯದಿಂದ ಉತ್ತರ ಕೊಟ್ಟರು. ಅವರ ಘನವಾದ ವ್ಯಕ್ತಿತ್ವ ಮೇರು ಪರ್ವತದಷ್ಟು ಎತ್ತರದ ವಿವಿಧ ಕಲಾ ನೈಪುಣ್ಯತೆಗೆ ಅನುಗುಣವಾಗಿತ್ತು, ಆ ಉತ್ತರ, ಅದು ನನ್ನ ಜ್ಞಾಪಕದಲ್ಲಿ ಇಂದೂ ಉಳಿದಿದೆ.

ಅವರನ್ನು ದುರ್ಗದ ವೆಂಕಟಪ್ಪನವರು ಎಂದು ಕರೆಯುತ್ತಿದ್ದರು. ವಿಚಾರಿಸಿದ್ದರಲ್ಲಿ, ಶ್ರೀ ವೆಂಕಟಪ್ಪನವರ ತಂದೆಯವರು ಚಿತ್ರದುರ್ಗದಲ್ಲಿ ಜೀವನ ನಡೆಸುವುದು ಕಷ್ಟವಾದ್ದರಿಂದ ಮೈಸೂರಿಗೆ ಹೋದರೆಂದೂ ಅಲ್ಲಿ ನೆಲಸಿದರೆಂದೂ ತಿಳಿಯಿತು. ವೆಂಕಟಪ್ಪನವರು ಹುಟ್ಟು ಕಲಾವಿದರು. ಹುಟ್ಟುವಾಗಲೇ ವೀಣೆ ಕುಂಚಗಳನ್ನು ಹಿಡುಕೊಂಡು ಹುಟ್ಟಿದರೇನೋ ಅನ್ನಿಸುತ್ತದೆ. ಬಂಗಾಳದ ಕಲಾ ಪ್ರವೀಣರಲ್ಲಿ ಶಿಷ್ಯತ್ವವೂ ದೊರೆತು ಕಲಾ ಪ್ರೌಢಿಮೆ ಪರಿಪೂರ್ಣತೆಯನ್ನು ಪಡೆಯಿತು ಎಂದು ಎಲ್ಲರಿಗೂ ತಿಳಿದ ಮಾತು.

ವೆಂಕಟಪ್ಪನವರಿಗೆ ತಮ್ಮ ಯೋಗ್ಯತೆಯ ಬಗ್ಗೆ ಅಭಿಮಾನವಿತ್ತು. ಅವರಲ್ಲಿ ಸಾಕಷ್ಟು ವಿಶಾಲ ಮನೋಭಾವನೆಯೂ ಇತ್ತು. ಒಂದು ಸಲ ಮೈಸೂರಿನ ಮಹಾರಾಜರು ಅವರಿಂದ ಒಂದು ಕಲಾಕೃತಿಯನ್ನು ಪಡೆದು ಅವರನ್ನು ಅವರ ಸ್ವಭಾವವನ್ನೂ ತಿಳಿಯದೆ ಆ ಕೃತಿಯ ಬಗ್ಗೆ ಹಣ ಕಳಿಸಿದರು. ಅದು ವೆಂಕಟಪ್ಪನವರಿಗೆ ರುಚಿಸಲಿಲ್ಲ, ಒಂದು. ಮತ್ತೊಂದು ಅವರ ಯೋಗ್ಯತೆಗೆ ತೀರಾ ಕಡಿಮೆ. ಅವರಿಗೆ ಸಿಟ್ಟು ಬಂದು ಕೋರ್ಟಿನಲ್ಲಿ ದಾವಾ ಹಾಕಿ ನಂತರ ವಾಪಸ್ಸು ತೆಗೆದುಕೊಂಡರೆಂದು ತಿಳಿಯಿತು. ಅವರ ಸ್ವಾಭಿಮಾನ ಮೆಚ್ಚತಕ್ಕದ್ದು. ದೊಡ್ಡಸ್ತಿಕೆಯೂ ಅಷ್ಟೆ.

ಅವರು ಬಯಲಾದ ನಂತರ, ಅವರ ಅನೇಕ ಅತ್ಯಂತ ಶ್ರೇಷ್ಠ ಹಾಗೂ ಬೆಲೆಯುಳ್ಳ ಕಲಾಕೃತಿಗಳನ್ನು ಬಿಟ್ಟು ಹೋದರು. ನನಗೆ ಭಯವಿತ್ತು, ಏನಾಗುವುದೋ ಎಂದು. ಕೆಲವರು ಶ್ರೀಮಂತ ಕಲಾ ಪ್ರೇಮಿಗಳು ಎಷ್ಟಾದರೂ ಬೆಲೆ ಕೊಡುವುದಕ್ಕೆ ಸಿದ್ದರಾಗಿದ್ದರೆಂದು ತಿಳಿಯಿತು. ಹಾಗಾಗಿದ್ದರೆ ಎಲ್ಲೆಲ್ಲೋ ಚದುರಿ ಹೋಗುತ್ತಿದ್ದವು. ಆದರೆ ಅವರ ಸೋದರಳಿಯ ಶ್ರೀ ರಾಜು ಅವರು ದೊಡ್ಡ ಮನಸ್ಸು ಮಾಡಿ ಹಣಕ್ಕೆ ಆಸೆ ಪಡದೆ ವೆಂಕಟಪ್ಪನವರು ಶಾಶ್ವತವಾಗಿ ಉಳಿಯಬೇಕು. ಅವರ ಹೆಸರಿನಲ್ಲಿ ಸಂಸ್ಥೆಯೊಂದು ಸ್ಥಾಪಿತವಾಗಬೇಕೆಂಬ ಅವರ ಆಸೆ ನನಗೆ ತಿಳಿಯಿತು. ಅದನ್ನು ಮೆಚ್ಚಿ ಕೂಡಲೇ ಒಪ್ಪಿ ಅವರ ಹೆಸರಿನಲ್ಲಿ "ವೆಂಕಟಪ್ಪ ಆರ್ಟ್ ಗ್ಯಾಲರಿ" ಎಂಬ ಕಟ್ಟಡವನ್ನು ಆಗ್ಗೆ ಸುಮಾರು 4-5 ಲಕ್ಷ ರೂ ಬೆಲೆ ಬಾಳುವ ಕಟ್ಟಡವನ್ನು ಕಬ್ಬನ್ ಪಾರ್ಕಿನಲ್ಲಿ ಹಳೇ ಮ್ಯೂಜಿಯಮ್ ಪಕ್ಕದಲ್ಲಿ ಕಟ್ಟಿಸಿ ಅವರಿಗೆ ಸಂಬಂದಪಟ್ಟ ಅಮೂಲ್ಯ ಚಿತ್ರಗಳು, ಮುಂತಾದ ಕಲಾಕೃತಿಗಳನ್ನು ಅಲ್ಲಿ ಇಡಿಸಲಾಯಿತು.



ಮುಖ್ಯಮಂತ್ರಿ ಸಿ. ನಿಜಲಿಂಗಪ್ಪನವರಿಂದ ಕೆ.ವಿ. ಯವರಿಗೆ ಗೌರಾವಾರ್ಪಣೆ, ಬೆಂಗಳೂರಿನಲ್ಲಿ , 6-8-1962 ರಂದು ನವಾಬಿ ಮಹದಿ ಸವಾಜ್ ಜಂಗ್, ಸಂಗೀತ ನೃತ್ಯ ಅಕಾಡೆಮಿಯ ಅಧ್ಯಕ್ಷರೂ ಉಪಸ್ಥಿತರಿದ್ದಾರೆ.

Chief Minister S. Nijalingapa Honouring KV in Bangalore on 6.8.1962, Nawab Mehadi Nawaz Jung, Chairman, Central Sangeet - Nritya Academy is also seen.

ವೆಂಕಟಪ್ಪ ಕಲಾಭವನಕ್ಕೆ ಹೋಗಿ ಒಳಗೆ ನಿಂತರೆ ಸ್ವರ್ಗದ ಬಾಗಿಲು ತೆಗೆದಂತೆ ಅನಿಸುತ್ತದೆ. ಏನೋ ಒಂದು ರೀತಿಯ ಭಾವನೆಗಳು ಹೊರಹೊಮ್ಮಿ ಹೊಸ ವಾತಾವರಣ, ಹೊಸ ಅನುಭವ ಉಂಟಾಗುತ್ತದೆ. ಪ್ಲಾಸ್ಟರ್ ಆಫ್ ಪ್ಯಾರಿಸ್‌ನಲ್ಲಿ ಮಾಡಿರುವ ನಟರಾಜನ ಕೃತಿ ನೋಡಿದರೆ ನಟರಾಜ ನಾಟ್ಯ ಮಾಡಿದಂತೆಲ್ಲಾ ಹೊಸ ಪ್ರಪಂಚಗಳು ಹುಟ್ಟುತ್ತವೇನೋ ಅನಿಸುತ್ತದೆ. ಹಾಗೆಯೇ ಬುದ್ಧನು ಕುದುರೆಯನ್ನು ಅಗಲಿ ಹೋಗುವಾಗ ಅದರ ಕಣ್ಣೀರು ಆತನ ಕಣ್ಣಿನಲ್ಲಿ ಹೊರ ಸೂಸುವುದರಲ್ಲಿ ರುವ,ತುಂಬಿ ಹರಿಯುವುದರಲ್ಲಿ ರುವ ಕಣ್ಣು ನೋಡಿದಾಗ ನಮ್ಮಲ್ಲಿ ಉಂಟಾಗುವ ಅನುಕಂಪದ ಅಗಲುವಿಕೆಯನ್ನು ವರ್ಣಿಸುವುದು ಕಷ್ಟ ಸಾಧ್ಯ.

ಹೀಗೆಯೇ ಉಳಿದ ನಾನಾ ಬಗೆಯ ಕಲಾ ಕೃತಿಗಳನ್ನು ನೋಡಿದಂತೆಲ್ಲಾ ಮನಸ್ಸಿನಲ್ಲಿ ಉಂಟಾಗುವ ಭಾವನೆಗಳನ್ನು ವರ್ಣಿಸುವುದು ನಮ್ಮಂತಹವರಿಗೆ ಸುಲಭ ಸಾಧ್ಯವಿಲ್ಲ . ಸಾಹಿತಿಗಳಿಗೆ ಸಾಧ್ಯವಾಗಬಹುದು. ವೆಂಕಟಪ್ಪನವರ ಮೆಮೋರಿಯಲ್ ಕಲಾ ಸಂಸ್ಥೆಗೆ ಹೋಗಿದ್ದೇನೆ. ಪುನಃ ಪುನಃ ಹೋಗಿ ಹೊಸ ಚೈತನ್ಯ ಪಡೆಯಬೇಕೆನ್ನಿಸುತ್ತದೆ.

ಈ ಕಲಾ ಮಂದಿರ ಒಂದು ದೇವಾಲಯ. ಅದನ್ನು ಸರಿಯಾದ ರೀತಿಯಲ್ಲಿ ಅತ್ಯಂತ ಜಾಗರೂಕತೆಯಿಂದ ಕಾಯ್ದಿಡಬೇಕು, ಶತಮಾನಗಳವರೆಗೆ ಮಾನವತೆಯನ್ನು ಮೇಲಕ್ಕೆ ಒಯ್ಯಲು.

# ಸಿದ್ಧಿ ಪುರುಷ

ವೈ. ಸುಬ್ರಹ್ಮಣ್ಯರಾಜು

ಕಲಾ ಸಾರ್ವಭೌಮ, ನೈಷ್ಠಿಕ ಬ್ರಹ್ಮಚಾರಿ, ಸಂಗೀತ ಶಾಸ್ತ್ರ ವಿಶಾರದ, ಚಿತ್ರದುರ್ಗದ ಕೆ. ವೆಂಕಟಪ್ಪನವರನ್ನು ನಾಲ್ವಡಿ ಕೃಷ್ಣರಾಜ ಒಡೆಯರು ಸನ್ಮಾನಿಸಲು ಆಸ್ಪದ ಕೊಡದೆ, ನಾನೊರ್ವ ಚಿತ್ರಕಲಾ ವಿದ್ಯಾರ್ಥಿ ಎಂದೇ ಕೊನೆಯವರೆಗೂ ಹೇಳಿಕೊಳ್ಳುತ್ತಿದ್ದರು. ಆದ್ದರಿಂದಲೇ ಅವರೊಬ್ಬ ಸಿದ್ಧ ಪುರುಷ. ಇವರ ಪೂರ್ವಿಕರು ಶ್ರೀ ರಾಮ ಭಕ್ತರಾಗಿದ್ದು, ಸೋಮವಂಶ ಆರ್ಯಕ್ಷತ್ರಿಯ ಜನಾಂಗದ ಇವರು 1887ರ ಜೂನ್ 23 ರಂದು ಮೈಸೂರಿನಲ್ಲಿ ಜನಿಸಿದರು.

ಇವರ ತಂದೆ ಕೃಷ್ಣಪ್ಪನವರು ರಚಿಸಿದ ''ಶ್ರೀ ಶಾರದ'' ಚಿತ್ರವು ಮೈಸೂರು ಜೈನ್ ಬೋರ್ಡಿಂಗ್ ಹೋಂನಲ್ಲಿ ಇದೆ. ''ಮೆಡಲಿಸ್ಟ್ ವೆಂಕಟಪ್ಪ ರಚಿಸಿದ್ದು'' ಎಂದು ಬೆಂಗಳೂರು ಸುಧಾ ವಿ. ರೆಡ್ಡಿಯವರ ಮನೆಯಲ್ಲಿರುವ ಶ್ರೀ ವೆಂಕಟೇಶ್ವರ, ಶ್ರೀದೇವಿ ಭೂದೇವಿಯ ಚಿತ್ರಗಳು (ಉಬ್ಬಚಿತ್ರ ಬರೆದದ್ದು), ಮೈಸೂರು ಇರ್ವಿನ್ ರೋಡ್ ಕ್ರಾಸ್, ಸೀತಾರಾಮ ಮಂದಿರದಲ್ಲಿರುವ ಒಂದೇ ದಿನದಲ್ಲಿ ರಚಿಸಿ ಪೂಜೆಗೆ ಸಿದ್ಧಪಡಿಸಿದ ''ಏಕಾಂತ ರಾಮ'' ಚಿತ್ರಗಳು ಮರೆಯದಂತಹುವು.

ಕೆ. ವೆಂಕಟಪ್ಪನವರು ಮನೆಯಲ್ಲಿ ತಂದೆಯ ಬಳಿ ಕಲಾಭ್ಯಾಸ ಮಾಡುತ್ತಾ, ನಂತರ ಶ್ರೀ ಚಾಮರಾಜೇಂದ್ರ ಚಿತ್ರ, ಕರಕುಶಲ ಶಾಲೆಯಲ್ಲಿ ಆರ್.ಟಿ. ರಾಮಕೃಷ್ಣನ್‌ರವರಲ್ಲಿ ಪಾಶ್ಚಾತ್ಯ ಕಲಾಭ್ಯಾಸ ಮಾಡಿ, ಮದ್ರಾಸ್ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿ ಹೊಸ ಅರಮನೆಯ ನಿರ್ಮಾಣ ಕಾರ್ಯದಲ್ಲಿ ನಕಾಸೆ ಬಿಡಿಸುವ ಕೆಲಸದಲ್ಲಿ ಪ್ರಸಿದ್ಧರಾದರು. ಆಗ ನಮ್ಮ ತಾತ ಸುಂದರಯ್ಯನವರು ತರುಣರಾದರೂ ಕೆಲಸದಲ್ಲಿ ನಿಷ್ಠಾವಂತ ವೆಂಕಟಪ್ಪನವರಿಗೆ ದೊಡ್ಡವರಿಗೆ ಕೊಡುವಷ್ಟು ಸಂಭಾವನೆ ಕಲ್ಪಿಸಿದರು. ಅರಮನೆ ಚೀಫ್ ಎಂಜಿನಿಯರ್ ರಾಘವೇಲು ನಾಯಿಡುರವರು ಸುಂದರಯ್ಯನವರನ್ನು ಕುರಿತು ''ಏನು ಮೀಸೆ ಬಂದವರಿಗೂ ಒಂದೇ ಸಂಭಾವನೆ ತರುಣರಿಗೂ ಒಂದೇ ರೀತಿಯಾಗಿ ಕೊಟ್ಟಿರುವಿರಲ್ಲಾ'' ಎಂದಾಗ ಆ ತರುಣನನ್ನೆ ಕೇಳಿ ಎಂದು ಸೂಚಿಸಿದರು. ಅದೇ ರೀತಿ ಚೀಫ್ ಎಂಜಿನಿಯರ್ ರಾಘವೇಲೂರವರು ಕೇಳಲಾಗಿ ''ಸ್ವಾಮಿ ಮೀಸೆಯಲ್ಲ ಕೆಲಸ ಮಾಡುವುದು ಕೈ'' ಎಂದು ಉತ್ತರ ಪಡೆದು, ಆ ತರುಣ ಚಿತ್ರಕಲಾವಿದನ ಮಾತು ಕೇಳಿ ಮನದಲ್ಲಿಯೇ ಸಂತೋಷಪಟ್ಟು ಪ್ರೋತ್ಸಾಹಿಸುತ್ತಿದ್ದರಂತೆ.

ಬಿಡುವಾದಾಗ ಮನೆಯಲ್ಲಿ ಸಿಂಹ ಸಿಂಹಿಣಿ ಚಿತ್ರವನ್ನು ರಚಿಸಿದರು. ಅದನ್ನು ಮಹಾಸ್ವಾಮಿಯವರ ಪಾಶ್ಚಾತ್ಯ ಪ್ರೈವೇಟ್ ಸೆಕ್ರೆಟರಿಯವರಿಗೆ ತೋರಿಸಿದಾಗ ಆ ಚಿತ್ರದೊಡನೆ ನಾಲ್ವಡಿ ಶ್ರೀ ಕೃಷ್ಣರಾಜ ಒಡೆಯರನ್ನು ಭೇಟಿ ಮಾಡಿಸಿದರು. ಪ್ರಭುಗಳು ನಂಬದೆ ಅರಮನೆಯಲ್ಲಿ ಚಿತ್ರ ರಚಿಸಲು ಒಂದು ಪ್ರತಿಮೆ ಇಟ್ಟು ಬರೆಯಲು ಹೇಳಿದರು. ಕೆಲವು ದಿನಗಳಲ್ಲೇ ಸುಂದರ ಚಿತ್ರ ಮೂಡಿದ್ದನ್ನು ನೋಡಿ ಸಂತೋಷಪಟ್ಟು ಮಹಾರಾಜರು ಒಂದು ನೂರು ರೂಪಾಯಿಗಳನ್ನು ಸಂಭಾವನೆ ಕೊಟ್ಟು ಗೌರವಿಸಿದರು. ಅಲ್ಲಿಂದ ಮುಂದೆ ಮಹಾರಾಜರು ವೆಂಕಟಪ್ಪನವರು. ಆಶೋತ್ತರಗಳನ್ನು ಅರಿತು ಇಂಗ್ಲೀಷ್ ವಿದ್ಯೆ ಕಲಿಸಲು ಒಬ್ಬ ಉಪಾಧ್ಯಾಯರನ್ನು ಏರ್ಪಡಿಸಿ ಆಗ ಹೆಸರುವಾಸಿಯಾಗಿದ್ದ ಕಲ್ಕತ್ತಾ ಚಿತ್ರಕ ಲಾಶಾಲೆಯಲ್ಲಿ ಚಿತ್ರಶಿಲ್ಪ ಸೂಕ್ಷ್ಮ ಚಿತ್ರಗಳ ಕಲೆಯನ್ನು, ಪ್ರಕೃತಿ ಚಿತ್ರಗಳನ್ನು, ಸಂಯೋಗ ಚಿತ್ರಗಳನ್ನು ಕಲಿಯಲು ಅನುಕೂಲ ಕಲ್ಪಿಸಿದರು.

ಒಂದೇ ಸಮನೆ ಧ್ಯಾನಸಕ್ತನಾದ ತಪಸ್ವಿಯಂತೆ ಕೆಲಸ ಮಾಡಿದ ವೆಂಕಟಪ್ಪನವರ ಕಲೆ ಅವರ ಗುರು ಅಬನೀಂದ್ರನಾಥ ಠಾಗೂರರಿಗೆ ಸಂತೋಷ ಪಡಿಸಿದ್ದಲ್ಲದೇ, ಪಾಶ್ಚಾತ್ಯರಾದ ಲೇಡಿ ಹ್ಯಾರಿಗ್‌ಹ್ಯಾಂರವರು ಅಜಂತಾ ಗುಹೆಯ ಭಿತ್ತಿಚಿತ್ರಗಲನ್ನು ನಕಲು ಮಾಡಿಸುವುದಕ್ಕಾಗಿ ನಂದಲಾಲ್ ಬೋಸ್‌ರವರ ಜೊತೆಗೆ ಇವರನ್ನು ಶಿಫಾರಸ್ಸು ಮಾಡಲಾಯಿತು.

ಚಿತ್ರಕಲೆ, ಶಿಲ್ಪ, ಕಲಾಭ್ಯಾಸದ ಜೊತೆಗೆ ಸಂಗೀತದಲ್ಲಿ ವೀಣಾವಾದನವನ್ನು ಅಭ್ಯಾಸಮಾಡಿ ಅಲ್ಲಿನ ಒಂದು ಭಾರಿ ಸ್ವಾಗತ ಮಂಟಪದ ಚಿತ್ರಗಳನ್ನು ರಚಿಸಿದ ವಿಷಯ ಲಂಡನ್ನಿನ ''ಸ್ಟುಡಿಯೋ'' ಪತ್ರಿಕೆಯಲ್ಲಿ ಪ್ರಕಟಿಸಿರುವುದನ್ನು ಸಿ.ಟಿ.ಐ ನ ಲೈಬ್ರರಿಯಲ್ಲಿ ಪ್ರಕಟವಾಗಿತ್ತು. ಕಲ್ಕತ್ತೆಯಲ್ಲಿ ಅಭ್ಯಾಸ ಮುಗಿಸಿ ಬಂದ ಕಾಲದಲ್ಲಿ ನಮ್ಮ ತಂದೆ ಯಲ್ಲಪ್ಪನವರು, ಸೋದರ ಮಾವ ಮುನಿಸ್ವಾಮಯ್ಯನವರು ಅವರ ಬಳಿ ಹೋಗಿ

ಯೋಗಕ್ಷೇಮ ವಿಚಾರಿಸಿ ವಂಶೋದ್ಧಾರಕ್ಕಾದರೂ ಮದುವೆ ಮಾಡಿಕೊಳ್ಳುವಂತೆ ಹೇಳಲು ಅಂತಹ ರಾಮಕೃಷ್ಣಾದಿಗಳ ವಂಶವೇ ಇಲ್ಲ, ನನ್ನದೆಂತಹ ವಂಶವೆಂದು ಉತ್ತರಿಸಿದರಂತೆ. ಮೈಸೂರು ಅಗ್ರಹಾರದ ಕತ್ತಿ ಗೋಪಾಲ ರಾಜ ಅರಸರ ಲಾಯದಲ್ಲಿದ್ದ ಬಂಗಲೆಯಲ್ಲಿ ನಾನೊಂದು ಸಲ ಅವರೆಲ್ಲಾ ಚಿತ್ರಗಳು ಬಣ್ಣಗಳೂ ಕುಂಚಗಳನ್ನೊಳಗೊಂಡ ಪ್ರದಶನ ನೋಡಿದ್ದು ಇನ್ನೂ ನೆನಪಿದೆ.

ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಂಗಾಳ ಚಿತ್ರಕಲಾವಿದರೆಲ್ಲ, ಚಿತ್ರಪ್ರದರ್ಶನಗಳನ್ನು ಡಾ। ಕಜಿನ್ಸ್‌ರವರಕಲೆಯ ಬಗ್ಗೆ ಉಪನ್ಯಾಸಗಳನ್ನು ನೋಡಿದ್ದ, ಕೇಳಿದ್ದ ನನಗೆ ಅವರ ''ಮಹಾ ಶಿವರಾತ್ರಿ'', ''ರಾಧ ಮತ್ತು ಜಿಂಕೆ'', ''ಅರ್ಧನಾರೀಶ್ವರ'', ''ಊಟಿಯ ಪ್ರಕೃತಿ ಚಿತ್ರ'', ''ವೀಣೆ ಶೇಷಣ್ಣನವರ ಶಿಲ್ಪ'', ''ಮಾಣಿಯ ಶಿಲ್ಪ'' ಯೆಲ್ಲವೂ ಮೆಚ್ಚುವಂತಿದ್ದವು. ಬಂಗಾಳದ ಚಿತ್ರಕಲೆ ಒಬ್ಬೊಬ್ಬ ಕಲಾವಿದ ಒಂದೊಂದು ವಿಧವಾಗಿ ತನ್ನತನವನ್ನು ತೋರುವ ಚಿತ್ರಗಳು. ಈಗಲೂ ಜಗನ್ ಮೋಹನ್ ಚಿತ್ರಶಾಲೆಯಲ್ಲಿ ಶೇಖರಿಸಿ ಪ್ರದರ್ಶಿತವಾಗಿರುವ 'ಅಂತ್ಯಜರನು ಯಾವ ರೀತಿ ಕಾಣುತ್ತಿದ್ದ ದೃಶ್ಯ', 'ಶ್ರೀ ಚಾಮುಂಡೇಶ್ವರಿಯ' ಅದ್ಭುತ ಸೂಕ್ಷ್ಮಚಿತ್ರ ಮೊದಲಾದವು ಮನದಲ್ಲಿ ಬಂಗಾಳ ಕಲಾಶಾಲೆಯಿಂದ ಹೊರಬಂದ ರತ್ನಗಳು ಕಣ್ಣಿದ್ದು ಕಲೆಯ ತಿರುಳನ್ನರಿತವರಿಗೆ ಒಂದು ಹೊಸ ಪ್ರಪಂಚ ಕಂಡಂತಾಗುವುದು.

ಅವರ ಬುದ್ಧನ ರಾಜ ಪರಿತ್ಯಾಗದ ಶಿಲ್ಪವಂತೂ ವೈರಾಗ್ಯ ಶಿಕಾಮಣಿಯಾಗಲು ಹೊರಟ ರಾಜಕುಮಾರನ ಶಿಲ್ಪ ಚಿರಸ್ಮರಣೀಯ. ವೆಂಕಟಪ್ಪ ಮಹಾ ಸ್ವಾಮಿಯವರ ಕೋರಿಕೆಯಂತೆ ಕೆಲವು ರೀಲಿಫ್ ಮಾಡಲ್‌ಗಳನ್ನು ಅರಮನೆ ಅಂಬಾ ವಿಲಾಸದ ಪ್ಯಾಲೆಸ್‌ಗಳಿಗೆ ರಚಿಸಿದರು. ಅವು ಒಂದೊಂದು ಒಂದು ಕಲಾರತ್ನ. ಇವುಗಳಲ್ಲಿ ಮೊದಲನೆಯದು ಶಕುಂತಲೆಯ ಕಣ್ವರ ಆಶೀರ್ವಾದ ಪಡೆದು ಆಶ್ರಮವನ್ನು ಬಿಟ್ಟು ಹೊರುಡುವಾಗ ಮುದ್ದು ಜಿಂಕೆಯು ಸೆರಗನ್ನೆಳೆಯುವುದಾಗಲಿ, ಪ್ರಿಯಂವದ ಮೊದಲಾದ ಸಖಿಯರು ಶೋಕಿಸುತ್ತಿರುವುದಾಗಲಿ ಪ್ರತಿಯೊಬ್ಬ ಮನುಜನಿಗೂ ಬರುವ ಸನ್ನಿವೇಶ.

ಹೀಗೆ ಶ್ರೀರಾಮನು ಮುದ್ರಿಕಾಂಗುಳಿಯನ್ನು ಹನುಮನಿಗೆ ಕೊಟ್ಟು ಕಳುಹುವ ಶಿಲ್ಪ, ಬುದ್ಧನು ಬಿಕ್ಷಾಪಾತ್ರೆ ಹಿಡಿದು ಅರಮನೆಗೆ ಬಂದಾಗ ಹೆಂಡತಿ ಮತ್ತು ಮಗನೊಡನೆ ಸಮಾಗಮ, ಧನುರ್ವಿದ್ಯಾನಿಪುಣ ಭೀಷ್ಮಾಚಾರ್ಯರು ಶಿಷ್ಯರಿಗೆ ಗುರಿ ಇಟ್ಟು ಬಾಣ ಪ್ರಯೋಗ ಮಾಡಿಸುವಂತಿರುವ ಶಿಲ್ಪ, ಏಕಲವ್ಯನ ಧನುರ್ವಿದ್ಯಾ ಚತುರತೆ ಗುರುಭಕ್ತಿ; ಮತ್ತು ನಾಟ್ಯ ಶಿವ.

ಇಂತಹ ಅದ್ಭುತ ಕಲಾ ಶಿಲ್ಪಿಯನ್ನು ಆಗಾಗ ಬಂದು ನೋಡಲು ನನಗೆ ಅವಕಾಶ ಕೊಟ್ಟಿದ್ದ ಸಂದರ್ಭದಲ್ಲಿ ಅವರನ್ನು ಮಾವ, ನೀವು ಕಲಿತ ಚಿತ್ರಕಲೆಯನ್ನು ಯಾರಿಗೂ ಹೇಳಿ ಕೊಡುತ್ತಿಲ್ಲವೆಂಬ ಪ್ರಚಾರ ಇದೆ ಎಂದು ಕೇಳಲಾಗಿ ಅವರು ''ನೋಡು ನಾನು ಕಲಾ ಬೆಟ್ಟದ ಸಾವಿರ ಮೆಟ್ಟಿಲನ್ನು ಮುಟ್ಟಿರುವೆನು. ನಾನು 999 ಮೆಟ್ಟಲುಗಳಿಳಿದು ಬಂದು ಒಂದೊಂದು ಮೆಟ್ಟಲಾಗಿ ಅವರಿಗೆ 5 ವರ್ಷ ಕಲಿಸಿದರೆ ಈಗಿರುವ ನನ್ನ ಸ್ಥಾನವನ್ನು ಮುಟ್ಟಬೇಕಾದರೆ 995 ಮೆಟ್ಟಲುಗಳನ್ನು ತಿರುಗಿ ಹತ್ತಬೇಕಾಗುತ್ತದೆ. ನನಗೆ ಅರಮನೆಯ ಡಿಸ್ಪೆಂಸರಿ ಮೇಲೆ ಸ್ಟುಡಿಯೋ ಕಲ್ಪಿಸಿ ಕೊಟ್ಟಿದ್ದರೂ ಸಂತೆಪೇಟೆ ಗಲಾಟೆ ತಡೆಯಲಾಗುವುದಿಲ್ಲ. ಶಾಂತ ವಾತಾವರಣವಿಲ್ಲ. ಬೇಸಿಗೆಯಲ್ಲಿ ನನ್ನ ವೀಣೆ ಜೊತೆಯಲ್ಲಿ ಊಟಿಗೆ ಹೋಗಿ ಅಲ್ಲಿ ಶಾಂತಮಯ ಚಿತ್ರಗಳನ್ನು ರಚಿಸಿಕೊಂಡು ರಾತ್ರಿ ಬೆಳದಿಂಗಳಲ್ಲಿ ವೀಣಾವಾದನ ಮಾಡಿಕೊಂಡು ಮನಶಾಂತಿ ಪಡೆಯುತ್ತೇನೆ'' ಎಂದರು.

ಅವರ ಒಂದು ಚಿತ್ರ ರಾಮಮುದ್ರಿಕಾಂಗುಣವನ್ನು ಎಡಗೈಯಲ್ಲಿ ಕೊಡುತ್ತಿರುವಂತೆ ಪ್ರಕಟಿಸಿದಾಗ ಒಂದು ಪತ್ರಿಕೆಯ ಸಂಪಾದಕರಿಗೆ ಕಲ್ಕತ್ತಾ ಹೈಕೋರ್ಟಿನಲ್ಲಿ ಒಂದು ರೂಪಾಯಿ ದಂಡ ವಿದಿಸಿದರಂತೆ. ಪತ್ರಿಕೆಯಲ್ಲಿ ಪ್ರಕಟವಾದ್ದನ್ನು ನೋಡಿ ಆ ಪತ್ರಿಕೆ ಸಮೇತ ನಾನು ಕಾಣಲು ಹೋದಾಗ, ಈಗ ತಾನೆ ಕಲ್ಕತ್ತದಿಂದ ಬಂದೆ ಎಂದು ಹೇಳಿ ನನ್ನಲ್ಲಿದ್ದ ಪತ್ರಿಕೆಯನ್ನು ಕೇಳಲು ಅವರಿಗಿ ಒಪ್ಪಿಸಿ ಬಿಟ್ಟೆನು. ಅನೇಕ ಸಲ ಅವರ ಚಿತ್ರಗಳನ್ನು ನೋಡಬೇಕೆಂದು ಕೇಳಿಕೊಳ್ಳುತ್ತಿರಲಾಗಿ ಒಂದು ಸುದಿನ, ''ನಾಳೆ ಬೆಳಿಗ್ಗೆ ಒಂಬತ್ತು ಗಂಟೆಗೆ'' ಬರಹೇಳಿದರು. 'ನಮ್ಮ ಅಣ್ಣಾ ಶ್ರೀ

ನಾಗರಾಜ್ ಅವರನ್ನು ಕರೆದುಕೊಂಡು ಬರಲೇ' ಎಂದಾಗ 'ಆಗಲೆಂದರು'. ಒಂಬತ್ತು ಗಂಟೆಗೆ ಸರಿಯಾಗಿ ಅವರು ನಮ್ಮನ್ನು ಒಳಗೆ ಕರೆದೊಯ್ದರು. ಒಳಗೆ ಎರಡು ಕುರ್ಚಿಗಳಿದ್ದರೂ ಒಂದು ಈಜಲ್ ಮೇಲೆ ಚಿತ್ರಗಳನ್ನಿಡಲು ಅದರ ಮುಂದೆ ಒಂದು ಸ್ಟೂಲಿನ ಮೇಲೆ ಎರಡು ಪುಟ್ಟ ಕಾಗದದ ಸುರುಳಿಗಳನ್ನಿಟ್ಟು ಒಂದೊಂದು ನೀಲಗಿರಿಯ ಪ್ರಕೃತಿ ಚಿತ್ರವನ್ನು ಈಜಲಿನಮೇಲೆ ವಿವರಿಸಿದರು. ಈ ಚಿತ್ರಗಳನ್ನು ಮಹಾತ್ಮ ಗಾಂಧಿಯವರು ನೋಡಿ ಕೊಂಡಾಡಿದ್ದರೆಂದು ಕೇಳಿದ್ದೇನೆ.

ವೀಣೆ ಶೇಷಣ್ಣನವರ, ರವೀಂದ್ರನಾಥ ಟಾಗೂರರ ಶಿಲ್ಪ ಬೆಂಗಳೂರು ರವೀಂದ್ರ ಕಲಾ ಕ್ಷೇತ್ರದಲ್ಲಿತ್ತು. ಗಣಪತಿಗೆ ಭಕ್ತನು ಮೊದಕಗಳನ್ನರ್ಪಿಸುತ್ತಿರುವಂತೆ ಚಿತ್ರ, ಸ್ವರ್ಣ ಮಾರೀಚ ಜಿಂಕೆಯ ಚಿತ್ರ (ದೆಹಲಿಯ ನ್ಯಾಷನಲ್ ಮ್ಯೂಸಿಯಂನಲ್ಲಿದೆ) ದೂರದಲ್ಲಿರುವ ಸೀತೆ ಯಲ್ಲಿರುವಂತಿರುವ ಸೂಕ್ಷ್ಮ ಚಿತ್ರ.

ಅವರ ರಾಮಾಯಣದಲ್ಲಿನ ಸೇತು ಬಂಧನ, ಶ್ರೀರಾಮನ ವಿವಾಹ, ಪುಷ್ಪಕ ವಿಮಾನದಲ್ಲಿ ಶ್ರೀರಾಮ ಸೀತಾ ಪ್ರವಾಸ ಅಷ್ಟೇ ಪ್ರಬುದ್ಧ, ವೀಣೆ ಶೇಷಣ್ಣನವರ ಮೂರ್ತಿ ಶಿಲ್ಪ ಮಾಡಿದ್ದನ್ನು ವೀಣೆ ಶೇಷಣ್ಣವರ ಮೊಮ್ಮಗ ನೋಡಿ ತಾತ, ತಾತ, ಎಂದು ಹೇಳಿದ್ದನ್ನು ಅವರು ಕೇಳಿ ತಮ್ಮಲ್ಲೇ ತಾವು ಸಂತೋಷಪಡುತ್ತಿದ್ದರು. ಅರಮನೆ ಅಂಬಾ ವಿಲಾಸದ ಎಲ್ಲ ಲೈಟುಗಳನ್ನಾರಿಸಿ ಅವರು ರಚಿಸಿದ ವಿವಿಧ ರಿಲೀಫ್‌ಗಳನ್ನು 'ಒಂದು ಟಾರ್ಚ್ ಹಿಡಿದು ವಿವಿಧ ಕಡೆ ನೋಡಿದಾಗ ನಾನು ರಚಿಸಿರುವ ಶಿಲ್ಪದ ಅರಿವಾಗುತ್ತೆಂದರು'. ಅವರು ಕಿಲ್ಲೆ ಕಛೇರಿ ಭಕ್ಷಿ ಸುಬ್ರಹ್ಮಣ್ಯರಾಜರಸರನ್ನು ಬಿಟ್ಟು ಮಿಕ್ಕ ಯಾವ ಸೆಕ್ರೇಟರಿಗಳಿಗೂ ಯಾವಡೊಂಗ ಸಲಾಮ ಹಾಕುತ್ತಿರಲಿಲ್ಲ. ಅದರಿಂದ ಹುಜೂರು ಸೆಕ್ರೇಟರಿ ತಂಬೂ ಚೆಟ್ಟಿ ಮಹಾಸ್ವಾಮಿಯವರು ಕಾಲವಾದ ಮೇಲೆ ಅವರ ಸ್ಟುಡಿಯೋ ತ್ಯಜಿಸುವಂತೆ ಮಾಡಿದರು. ಸ್ವಾತಂತ್ರ್ಯ ಬರುವುದಕ್ಕೆ ಮುಂದು 'ತಂಬುಚೆಟ್ಟಿ ಮೂಟಿಕಟ್ಟಿ' ಎಂದು ಹೆಸರು ಪಡೆದರು. ವೆಂಕಟಪ್ಪ ಕಲಾಭ್ಯಾಸ ಮಾಡಿಸುತ್ತಿದ್ದ ಒಬ್ಬ ಶಿಷ್ಯನಿಂದ ರಚಿತವಾದ ರೇಖಾಚಿತ್ರಗಳೂ ಅವರು ಉಪಯೋಗಿಸುತ್ತಿದ್ದ ಮಾಡಲ್ ಸ್ಟಾಂಡು ಚಿತ್ರಕಲಾ ಪರಿಷತ್ತಿನಲ್ಲಿ ನೋಡಬಹುದು.

ವೆಂಕಟಪ್ಪ ಕಟ್ಟಿಸಿದ ಮಲ್ಲೇಶ್ವರದ 18ನೇ ಅಡ್ಡ ರಸ್ತೆಯ ಮನೆಯಲ್ಲಿ ಪ್ರತಿಯೊಂದು ಸ್ಥಳವನ್ನು ತೋರಿಸಿ ಸಂಧ್ಯಾಕಾಲದಲ್ಲಿ ಪೌರ್ಣಮಿಯ ದಿನ ಹೊರಗಿನ ಆವರಣದಲ್ಲಿ ಕಟ್ಟಿರುವ ಮಂಟಪದಲ್ಲಿ ವೀಣಾ ಮೊದಲಾದ ಸಂಗೀತ ನಡೆದು ಪುಳಿಯೋಗರೆ ಕಾಫಿ ಕುಡಿದರೆ ಹೇಗಿರುತ್ತೆ ನ್ನುತ್ತಿದ್ದರು. ಕರ್ನಾಟಕದ ಯಾವ ಚಿತ್ರಕಲಾ ಶಿಲ್ಪಿಯಾಗಲಿ ಚಿತ್ರಗಳಾಗಲಿ ಶಿಲ್ಪಯಾಗಲಿ ಉಚಿತವಾಗಿ ಕೊಡುವುದಕ್ಕೆ ಸಿದ್ಧನಿರುವುದಿಲ್ಲ. ಅಮೇರಿಕದ ಒಬ್ಬ ಚಿತ್ರಕಲಾ ಸಂಗ್ರಹಿಯೂ ಶ್ರೀ ಎಂ.ಎಸ್. ನಂಜುಂಡರಾಯರಿಗೆ ಕಮೀಷನ್ ಕೊಡಿಸುತ್ತೇವೆ, ಅವರ ಎಲ್ಲಾ ಕಲಾಕೃತಿಗಳನ್ನೂ ಕೊಡಿಸಿಕೊಡುವಿರಾ ಎಂದು ಕೇಳಿದ್ದಕ್ಕೆ ರಾಯರು ಒಪ್ಪದೆ ಅವೆಲ್ಲವೂ ನಮ್ಮ ಭಾರತದ ಆಸ್ತಿ ಎಂದು ತಿಳಿಸಿದ್ದು ನನಗೆ ನೆನಪಿದೆ.

ಕೆಲವು ಸಲ ಅವರ ಜನ್ಮದಿನದಂದು ತಮ್ಮ ಆತ್ಮೀಯರೆಲ್ಲರನ್ನೂ ಬರಮಾಡಿಕೊಂಡು ಚಾಮುಂಡೇಶ್ವರಿ ಭವನದ ಊಟೋಪಚಾರ ಮಾಡಿಸುತ್ತಿದ್ದರು. ಅವರು 25 ಮೇ 1965ನೇ ದಿನ ದೈವಾಧೀನರಾದರು. ಅವರ ಸೋದರಳಿಯ ಸೂಪರ್ ಸ್ಟುಡಿಯೋ ರಾಮರಾಜುರವರು ಅವರೆಲ್ಲ ಕಲಾಕೃತಿಗಳನ್ನೂ ಕರ್ನಾಟಕರಾಜ್ಯಕ್ಕೆ ದಾನಮಾಡಿ ಕೀರ್ತಿಗಳಿಸಿದರು. ಸರ್ಕಾರವೂ ಅವರ ಹೆಸರಿನಲ್ಲಿ ಒಂದು ಕಲಾಶಾಲೆಯನ್ನೂ ಕಟ್ಟಿಸಿ, ವೆಂಕಟಪ್ಪ ಚಿತ್ರಕಲಾ ಸಂಗ್ರಹಾಲಯವೆಂದು ಹೆಸರಿಟ್ಟಿರುವರಲ್ಲದೆ ಅವರ ಮನೆಯ ಬೀದಿಗೆ ''ಚಿತ್ರ ಶಿಲ್ಪ ವೆಂಕಟಪ್ಪ ರಸ್ತೆ' ಎಂದು ಹೆಸರಿಟ್ಟು ಅವರ ಹೆಸರನ್ನು ಶಾಶ್ವತಗೊಳಿಸಿದೆ.



ನರ್ತನ ಶಿವ, ಉಬ್ಬು ಚಿತ್ರ

Dancing Siva, a relief

# ನನ್ನ ವಿಶಿಷ್ಟ ರೋಗಿ

ಡಾ. ಕೆ ರಂಗಾಚಾರ್

ಸನ್ 1958ನೇ ಮಾರ್ಚಿ ತಿಂಗಳು 20ನೇ ತಾರೀಖು ಗುರುವಾರ ಬೆಳಿಗ್ಗೆ ನಾನು ಮಾಮೂಲಿನಂತೆ ನನ್ನ ಚಿಕಿತ್ಸಾಲಯದಲ್ಲಿ ರೋಗಿಗಳನ್ನು ಪರೀಕ್ಷೆ ಮಾಡುತ್ತಿದ್ದೆ. ಒಬ್ಬ ವ್ಯಕ್ತಿ ಬಂದು ಕುಳಿತಿದ್ದರು. ಅವರ ಸರದಿ ಬಂದಾಗ ಒಳಗೆ ಕೂಗಿದೆ. 'ಏನು' ಎಂದೆ.

"ನೀವು ಎಲ್ಲಾ ರೋಗಿಗಳನ್ನು ನೋಡಿ ಮುಗಿಸಿ, ನಂತರ ನಾನು ಹೇಳುತ್ತೇನೆ" ಅಂದರು. ಸರಿ ನಾನು ಮಿಕ್ಕ ರೋಗಿಗಳನ್ನು ಪರೀಕ್ಷೆ ಮಾಡಿ ಔಷಧಿ ಕೊಟ್ಟು ಕಳುಹಿಸಿ ಮತ್ತೆ ಕೂಗಿದೆ. ಅವರು ಹೇಳಿದರು. "ನನ್ನ ಹೆಸರು ರಾಮರಾಜು. ಶಿಲ್ಪಿ ವೆಂಕಟಪ್ಪನವರ ಸೋದರಳಿಯ. ನಮ್ಮ ಮಾವನವರಿಗೆ ಮೈಲಿ ಹುಷಾರಿಲ್ಲ. ನೀವು ಬಂದು ನೋಡುವುದಕ್ಕೆ ಆಗುತ್ತದೆಯೇ". ನಾನು ಆಗಲಿ ಬರುತ್ತೇನೆ ಅಂತ ಹೇಳಿದೆ.

ಚಿಕಿತ್ಸಾಲಯದಿಂದ ನನ್ನ ಕಾರಿನಲ್ಲಿ ಇಬ್ಬರೂ ವೆಂಕಟಪ್ಪನವರ ಮನೆಗೆ ಹೋದೆವು. ಅವರನ್ನು ನಾನು ಭೇಟಿ ಆದದ್ದು ಅದೇ ಮೊದಲು. ಮೊದಲ ದರ್ಶನಕ್ಕೆ ಅವರು ರೋಗಿಯಾಗಿ ಕಾಣಿಸಲಿಲ್ಲ. ಮುಖದಲ್ಲಿ ಒಂದು ಗಾಂಭೀರ್ಯ, ದಿಟ್ಟತನ, ಮಿತ ಭಾಷೆ. ಅವರನ್ನು ಪರೀಕ್ಷೆ ಮಾಡಿ ಹೇಳಿದೆ. "ನಿಮ್ಮ ದೇಹದಲ್ಲಿ ಭಯಂಕರ ವ್ಯಾಧಿ ಯಾವುದೂ ಇಲ್ಲ. ನಿಮ್ಮ ಹೃದಯದಲ್ಲಿ ಕುಂದಿಲ್ಲ. ನಾನು ಔಷಧಿ ಮಾತ್ರೆಗಳನ್ನು ಕಳುಹಿಸುತ್ತೇನೆ, ಅಂದೆ.

ಸಂಜೆ ಶಿಲ್ಪಿ ಎಸ್.ಬಿ. ಶಂಕರ್ ನನ್ನ ಚಿಕಿತ್ಸಾಲಯಕ್ಕೆ ಬಂದರು. ಅವರ ಹತ್ತಿರ ಔಷಧಿ ಕಳುಹಿಸಿ ಕೊಟ್ಟೆ.

ಅಂದಿನಿಂದ ನಾನು ವೆಂಕಟಪ್ಪನವರನ್ನು ಪ್ರತಿದಿನವೂ, ಇಲ್ಲ ದಿನತಪ್ಪಿ ದಿನವೂ ಪರೀಕ್ಷೆ ಮಾಡುತ್ತಿದ್ದೆ. ದೇಹಸ್ಥಿತಿ ಸ್ವಲ್ಪ ಸುಧಾರಿಸಿತ್ತು. ಇನ್ನು ಔಷಧಿ ನಿಲ್ಲಿಸುತ್ತೇನೆ. — ಟಾನಿಕ್ ಕಳುಹಿಸುತ್ತೇನೆ. ಅದು ನಿಮ್ಮ ದೌರ್ಬಲ್ಯಕ್ಕೆ ಸಹಾಯ ಮಾಡುತ್ತದೆ, ಅಂದೆ.

ಮಾರ್ಚಿ ತಿಂಗಳು 26ನೇ ತಾರೀಖು ಬುಧವಾರ ಅವರ ದೇಹಸ್ಥಿತಿ ವಿಚಾರಿಸಲು ಅವರ ಮನೆಗೆ ಹೋಗಿದ್ದೆ. ಅವರು ತಾವೇ ತಮ್ಮ ಕಲಾಕೃತಿಗಳನ್ನು ನನಗೆ ತೋರಿಸಿದರು. "Dr. R. Rangachar had come and made enquiries about the condition of my health. I showed him the two panels – Dancing Shiva and Dronacharya. He promised to send some tonic with Sri S.B. Shankar. Ramaraju came when the doctor was making enquiries and remained in the studio for sometime. At about 8 p.m. Sri S.B. Shankar came with some elixers and tablets". ಹೀಗೆ ಅವರ ದಿನಚರಿಯಲ್ಲಿ ಬರೆದಿದ್ದಾರೆ.

ವೆಂಕಟಪ್ಪನವರಿಗೆ ಅವರ ಕಲಾಕೃತಿಗಳಲ್ಲಿ ಎಷ್ಟು ತಪಶೀಲು ಬೇಕಾಗಿತ್ತೋ ಅಷ್ಟೇ ಪ್ರತಿಯೊಂದು ವಿಚಾರದಲ್ಲೂ ವಿವರಗಳು ಬೇಕಿತ್ತು. ಉದಾಹರಣೆಗೆ ನಾನು ಕಳುಹಿಸಿದ ಟಾನಿಕ್, ಔಷಧಿ, ಮಾತ್ರೆಗಳನ್ನು ಕೂಡ ಅವುಗಳ ಅನುಕ್ರಮಣಿಕೆ, ಉಪಯೋಗ, ಪ್ರಯೋಜನ ಏನು ಎಂಬುದನ್ನು ಕೂಲಂಕುಷವಾಗಿ ತಿಳಿದುಕೊಳ್ಳುತ್ತಿದ್ದರು.

ನಾನು ಅವರ ಮನೆಗೆ ಹೋಗಿ ಅವರನ್ನು ಪರೀಕ್ಷೆ ಮಾಡಿದ್ದಕ್ಕೆ ನನ್ನ ಫೀಸು (Fees) ಎಷ್ಟು ಅಂತ ಕೇಳಲು ರಾಮರಾಜು ಅವರನ್ನು ಕಳುಹಿಸಿದ್ದರು.

ನಾನು ಹೇಳಿದೆ "ವೆಕಟಪ್ಪನವರಿಗೆ ಔಷದೋಪಚಾರ ಮಾಡುವುದು, ಅವರಲ್ಲಿ ನನಗಿರುವ ಅಭಿಮಾನ ಮತ್ತು ಗೌರವ. ಆದ ಕಾರಣ ನಾನು ಫೀಸು ತೆಗೆದುಕೊಳ್ಳುವುದಿಲ್ಲ."

''ನಿಮ್ಮ ಫೀಸು ಖಂಡಿತ ಕೊಟ್ಟಿಬರಬೇಕೆಂದು ವೆಂಕಟಪ್ಪನವರು ನನಗೆ ಹೇಳಿದ್ದಾರೆ. ನೀವು ನಿರಾಕರಿಸಿದರೆ ಅವರ ಮನಸ್ಸಿಗೆ ಬೇಸರ ಪಡುತ್ತಾರೆ?'' ಅಂದರು ರಾಮರಾಜರು.

ನಾನು ನನ್ನ ಫೀಸು ಎಷ್ಟು ಅಂತ ಹೇಳಲಿಲ್ಲ . ಆದರೆ ವೆಂಕಟಪ್ಪನವರ ಮನಸ್ಸು ನೋಯಿಸಬಾರದು ಎಂದು ಅವರು ಕಳುಹಿಸಿದ ಹಣ ಸ್ವೀಕರಿಸುತ್ತಿದ್ದೆ . ಹೀಗೆ ವಾರಕ್ಕೊ ಅಥವಾ ತಿಂಗಳಿಗೋ ಒಮ್ಮೆ ನನಗೆ ಸಂಭಾವನೆ ಕಳುಹಿಸುತ್ತಿದ್ದರು. ಇನ್ನೊಬ್ಬರ ಹಂಗು ಅವರು ಇಟ್ಟುಕೊಳ್ಳುತ್ತಿರಲಿಲ್ಲ . ಅದು ಅವರ ನೀತಿ.

ಒಮ್ಮೆ ರಾಮರಾಜು ತಮ್ಮ ಮನೆಯಲ್ಲಿ ತಿಂಡಿ ಮಾಡಿಸಿ ವೆಂಕಟಪ್ಪನವರಿಗೆ ತಂದು ಕೊಟ್ಟರು. ವೆಂಕಟಪ್ಪನವರು ಅದಕ್ಕೆ ಬದಲಾಗಿ ಮಾವಿನಕಾಯಿ ಉಪ್ಪಿನಕಾಯಿ ಮತ್ತು ಸ್ವಲ್ಪ ದುಡ್ಡು ಕೊಟ್ಟರು.

ವೆನಕಟಪ್ಪನವರನ್ನು ಒಬ್ಬ ರೋಗಿ ಎಂದು ಹೇಳಲು ಸಾಧ್ಯವಿರಲಿಲ್ಲ . ಅವರ ಮೈ, ಬಟ್ಟೆ, ಹಾಸಿಗೆ, ಹೊದ್ದಿಗೆ ಉಪಯೋಗಿಸುತ್ತಿದ್ದ ಪಾತ್ರೆಗಳು ಜೊತೆಗೆ ಕರವಸ್ತ್ರ ಕೂಡ (ಇದನ್ನು ಯಾವಾಗಲೂ ಅವರ ತಲೆದಿಂಬಿನ ಹತ್ತಿರ ಇಟ್ಟುಕೊಳ್ಳುತ್ತಿದ್ದರು). ಯಾವಾಗಲೂ ಶುಚಿಯಾಗಿರುತ್ತಿದ್ದವು. ಅವರು ಮಲಗಿದ್ದ ಕೋಣೆ — ಯಾಕೆ ಅವರ ಮನೆಯಲ್ಲಿ ಇದ್ದ ಪ್ರತಿಯೊಂದು ಕೋಣೆಯಲ್ಲೂ ಒಂದು ಚೂರು ಕಸ, ಧೂಳು ಇರಲಿಲ್ಲ .

ಅವರ ದೇಹ ಹೇಗೆ ಶುಚಿಯಾಗಿತ್ತೊ ಹಾಗೆ ಅವರ ಮನಸ್ಸು ಕೂಡ ನಿರ್ಮಲ. ಇನ್ನೊಬ್ಬರಿಗೆ ಎಂದೂ ಕೆಟ್ಟದ್ದನ್ನು ನೆನಸಿದ್ದಿಲ್ಲ . ಅಸೂಯೆ, ದ್ವೇಷ ಅನ್ನೋದ್ದನ್ನೇ ಕಾಣರು. ಅವರು ಒಬ್ಬ ಖಂಡಿತವಾದಿ.

ಅವರ ನರಗಳಲ್ಲಿ ಮತ್ತು ಮಾಂಸಖಂಡಗಳಲ್ಲಿ ದೌರ್ಬಲ್ಯ ಬಿಟ್ಟರೆ ಅವರಲ್ಲಿ ಬೇರೆ ಯಾವ ವಿಧವಾದ ಭಯಂಕರ ವ್ಯಾಧಿ ಇರಲಿಲ್ಲ . ಅವರ ರಕ್ತ ಒತ್ತಡ; (Blood Pressure) ರಕ್ತ ಪರೀಕ್ಷೆ ಮಲ ಮೂತ್ರ ಪರೀಕ್ಷೆ ಎಲ್ಲವೂ ಮಾಡಿದ್ದೆ . ಎಲ್ಲವೂ ನೇಮಪ್ರಕಾರವಾಗಿದ್ದವು. ನನಗನ್ನಿಸುತ್ತೆ , ಅವರ ಮನಸ್ಸಿನಲ್ಲಿ ತನಗೆ ನರ ದೌರ್ಬಲ್ಯ, ನಿಶ್ಯಕ್ತಿ ಇನ್ನು ಸರಿ ಹೋಗುವುದಿಲ್ಲ ಅನ್ನೋ ಭಾವನೆ ಮೂಡಿತ್ತು .

ನಾನು ಅವರಿಗೆ ಇಂಜಕ್ಷನ್ ತೆಗೆದು ಕೊಳ್ಳುವುದಕ್ಕೆ ಪ್ರೇರೇಪಿಸಿದೆ. ''ನಾನು ಯಾವ ಡಾಕ್ಟರ್ ಹತ್ತಿರವೂ ಇಂಜಕ್ಷನ್ ತೆಗೆದುಕೊಂಡಿಲ್ಲ — ಇಂಜಕ್ಷನ್ ಯಾತಕ್ಕೋಸ್ಕರ'' ಅಂತ ಕೇಳಿದರು. ''ನಿಮ್ಮ ನರಗಳಿಗೆ ಶಕ್ತಿ ಬರುವುದಕ್ಕೆ ಕೊಡುತ್ತೇನೆ'' ಅಂದೆ.

''ಸರಿ ನಿಮ್ಮ ಹತ್ತಿರ ಇಂಜಕ್ಷನ್ ತೆಗೆದುಕೊಳ್ಳುತ್ತೇನೆ'' ಅಂದರು. ನಾನು ಮೊದಲು ದಿನಬಿಟ್ಟ ದಿನ ನಂತರ ವಾರಕ್ಕೆ ಎರಡು, ನಂತರ ವಾರಕ್ಕೆ ಒಂದು ಇಂಜಕ್ಷನ್ ಕೊಡುತ್ತಾ ಇದ್ದೆ . ''ನಿಮ್ಮ ಮನೆಯ ಆವರಣದಲ್ಲಿ ದಿನವೂ ಸ್ವಲ್ಪ ಹೊತ್ತು ನಡೆದಾಡಬೇಕು. ಹಾಗೇ ಸಾಧ್ಯವಾದರೆ ರಾಮರಾಜುರವರ ಆಸರೆಯಿಂದ ನಡೆಯಬಹುದು.'' ಅಂತ ಹೇಳಿದೆ. ಅವರ ಮನೆ ಆವರಣದಲ್ಲಿ ನಡೆದಾಡುತ್ತಿದ್ದರು.

''ನೀವು ವೀಣೆ ಕೂಡ ನುಡಿಸಬಹುದು. ದಿನವೂ ಅಭ್ಯಾಸ ಮಾಡಿದರೆ ಮೊದಲಿನ ಹಾಗೆ ನುಡಿಸಲು ಸಾಧ್ಯವಾಗುತ್ತೆ '' ಅಂದೆ. ''ಪ್ರಯತ್ನ ಪಡುತ್ತೇನೆ'' ಅಂದರು.

ಒಂದು ದಿನ ಬೆಳಿಗ್ಗೆ ಅವರಿಗೆ ಇಂಜಕ್ಷನ್ ಕೊಡಲು ಅವರ ಮನೆಗೆ ಮಾಮೂಲಿಗಿಂತ ಸ್ವಲ್ಪ ಮುಂಚೆ ಹೋದೆ. ಒಳಗೆ ವೀಣೆ ನುಡಿಸುವ ನಾದ ಕೇಳಿ ಬರುತ್ತಿತ್ತು . ಕಲ್ಯಾಣಿರಾಗ ಆಲಾಪನೆ ನುಡಿಸುತ್ತಿದ್ದರು. ಅವರನ್ನು ತೊಂದರೆಪಡಿಸದೇ ಹಾಗೇ ಕೇಳುತ್ತಾ ಇದ್ದೆ . ನನಗೆ ಅತ್ಯಂತ ಸಂತೋಷವಾಯಿತು. ಸ್ವಲ್ಪ ಹೊತ್ತಾದ ಮೇಲೆ ರಾಮರಾಜುರವರನ್ನು ಕೇಳಿದರು ''ಡಾಕ್ಟರ್ ಇನ್ನು ಬರಲಿಲ್ಲವೇ'' ಅಂತ. ಆಗ ನಾನು ಒಳಗೆ



Landscape

ಪ್ರಕೃತಿ ದೃಶ್ಯ

ಹೋದೆ. ''ನಾನು ಆಗಲೇ ಬಂದೆ. ನೀವು ವೀಣೆ ನುಡಿಸುವುದನ್ನು ಕೇಳುತ್ತಾ ಇದ್ದೆ. ನೀವು ಹೀಗೆಯೇ ದಿನವೂ ಅಭ್ಯಾಸ ಮಾಡಿದರೆ ಮೊದಲ ಹಾಗೆ ವೀಣೆ ನುಡಿಸೋದಕ್ಕೆ ಸಾಧ್ಯವಾಗುತ್ತೆ.'' ಅಂದೆ. ''ಇಲ್ಲಾ ಡಾಕ್ಟರ್ರೆ ಬೆರಳುಗಳು ಬಿರುಸಾಗಿದೆ. ಸಡಿಲವಾಗಿಲ್ಲ ನನ್ನ ಮನಸ್ಸಿಗೆ ಸಮಾಧಾನ ಆಗೋ ಹಾಗೆ ನುಡಿಸೋದು ಸಾಧ್ಯವಿಲ್ಲ'' ಅಂದರು.

ವೆಂಕಟಪ್ಪನವರು ಸಿಡುಮೋರೆಯ ಸೇರಿಕೆ ಇಲ್ಲದ ವ್ಯಕ್ತಿಯಾಗಿರಲಿಲ್ಲ. ಅವರು ಏಕಾಂತವಾಸಿ ಹೌದು. ಆದರೆ ಅವರಿಗೆ ಸ್ನೇಹಿತರು ಕಲಾಪ್ರೇಮಿಗಳು ಬೇಕಿತ್ತು. ನಿರರ್ಥಕ ಸಂಭಾಷಣೆ, ಹರಟೆ ಹೊಡೆದು ಕಾಲಹರಣ ಮಾಡುವವರನ್ನು ಅವರು ಹತ್ತಿರ ಸೇರಿಸುತ್ತಿರಲಿಲ್ಲ.

ಮಂತ್ರಿಗಳು — ಮಹರಾಜರು ಅಥವಾ ಸಾರ್ವಜನಿಕರು ಯಾರೇ ಆಗಲಿ ವೆಂಕಟಪ್ಪನವರ ಕಲಾಕೃತಿಗಳಲ್ಲಿ ನಿಜವಾದ ಆಸಕ್ತಿಯಿಂದ ನೋಡ ಬಯಸಿದರೆ ಅವರಿಗೆ ತಾವೇ ವಿವರವಾಗಿ ತೋರಿಸುತ್ತಿದ್ದರು. ಆದರೆ ನಿರ್ದಿಷ್ಟ ವೇಳೆಗೆ ಹೋಗಬೇಕಿತ್ತು. ಯಾರಾದರೂ ವೇಳೆ ತಪ್ಪಿ ದಿಢೀರನೆ ಬಾಗಿಲು ತಟ್ಟಿ ಒಳ ಹೋದರೆ ವೆಂಕಟಪ್ಪನವರಿಗೆ ಕೋಪ ಬರುತ್ತಿತ್ತು.

ಒಮ್ಮೆ ಈಗಿನ ಮಾನ್ಯ ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರನ್ನು ಕರೆದುಕೊಂಡು ಬರಬಹುದೇ ಅಂತ ಕೇಳಿದೆ. ಅದಕ್ಕೆ ಅವರು ಹೇಳಿದರು ''ನನಗೆ ರಾಜಕಾರಣಿಗಳು, ಮಂತ್ರಿಗಳು ಎಂದರೆ ಸಂದೇಹ, ಯಾಕೆಂದರೆ ಅವರು ನಿರ್ದಿಷ್ಟ ಕಾಲಕ್ಕೆ ಬರುವುದಿಲ್ಲ ಮತ್ತೆ ಅವರಿಗೆ ಒಳ್ಳೆಯ ಕಲೆಯಲ್ಲಿ ಗಂಧವೇ ಇರುವುದಿಲ್ಲ.'' ಅಂತ.

''ಆದರೆ ರಾಮಕೃಷ್ಣ ಹೆಗಡೆಯವರು ಹಾಗಲ್ಲ'' ಎಂದೆ. ಸರಿ ಮಧ್ಯಾಹ್ನ ಒಂದು ವೇಳೆ ಗೊತ್ತು ಮಾಡಿದರು. ಆ ವೇಳೆಗೆ ಸರಿಯಾಗಿ ರಾಮಕೃಷ್ಣ ಹೆಗಡೆ ಅವರ ಸಂಗಡ ನನ್ನ ಹೆಂಡತಿ, ವಿಮಲಾರಂಗಚಾರ್ ಮತ್ತು ನಾನು ಹೋದೆವು. ವೆಂಕಟಪ್ಪನವರು ಬಾಗಿಲು ತೆಗೆದು ನಿರೀಕ್ಷಿಸುತ್ತಿದ್ದರು. ವೆಂಕಟಪ್ಪನವರಿಗೆ ನಿಶ್ಶಕ್ತಿಯಾದ್ದರಿಂದ ಕ್ಷಮಾಪಣೆ ಕೇಳಿ ಸೋದರಳಿಯ ರಾಮರಾಜುರವರನ್ನು ನಮಗೆ ಸರಿಯಾಗಿ ತೋರಿಸಲಿಕ್ಕೆ ಹೇಳಿದರು. ನಾವು ಅವರ ಕಲಾಕೃತಿಗಳನ್ನು ವೀಕ್ಷಿಸಿದ ನಂತರ ಹೆಗಡೆಅವರನ್ನು ಹಾಸಿಗೆಯ ಬಳಿ ಕುಳ್ಳಿರಿಸಿ ಅವರ ಸಂಗಡ ಬಹಳ ಹೊತ್ತು ಸಂಭಾಷಣೆ ಮಾಡುತ್ತಿದ್ದರು.

ಮಾರನೆ ದಿನ ನಾನು ಇಂಜಕ್ಷನ್ ಕೊಡಲು ವೆಂಕಟಪ್ಪನವರ ಮನೆಗೆ ಹೋದಾಗ ಅವರು ಹೇಳಿದರು. ''ರಾಮಕೃಷ್ಣ ಹೆಗಡೆ ಅವರು ಇತರ ಅನೇಕ ರಾಜಕಾರಿಣಿಗಳ ಹಾಗಲ್ಲ. ಬಹಳ ತಿಳುವಳಿಕೆಯುಳ್ಳವರು. ಅವರನ್ನು ನಾನು ಬಹಳವಾಗಿ ಮೆಚ್ಚುತ್ತೇನೆ.''

ಇನ್ನೊಮ್ಮೆ ದಿ|| ವಿ. ಸೀತಾರಾಮಯ್ಯ (ವೀಸೀ) ಮತ್ತೆ ಒಬ್ಬ ಎ.ಐ.ಆರ್. ಅಧಿಕಾರಿಯನ್ನು ವೆಂಕಟಪ್ಪನವರ ಮನೆಗೆ ಕರೆದುಕೊಂಡು ಹೋಗಿ, ವೀಸೀ ವೆಂಕಟಪ್ಪನವರ ಪ್ರಶ್ನೋತ್ತರಗಳನ್ನು ರೆಕಾರ್ಡ್ ಮಾಡಲು ವ್ಯವಸ್ಥೆ ಮಾಡಿದ್ದೆ. ವೀಸೀಯವರು ವೆಂಕಟಪ್ಪನವರನ್ನು ಲಲಿತಕಲೆ ಮತ್ತು ಸಂಗೀತಕಲೆ ವಿಚಾರಪ್ರಶ್ನೆ ಕೇಳಿದರು. ವೆಂಕಟಪ್ಪನವರು ಸಮಂಜಸ ಉತ್ತರ ಕೊಡುತ್ತಿದ್ದರು. ವೀಸೀಯವರು ನನಗೆ ಹೇಳುತ್ತಿದ್ದರು. ''ವೆಂಕಟಪ್ಪನವರು ಲಲಿತಕಲೆಯಲ್ಲಿ ಎಷ್ಟು ಪ್ರವೀಣರೋ ವೀಣೆ ನುಡಿಸುವುದರಲ್ಲಿಯೂ ಅಷ್ಟೇ ನಿಪುಣರು'' ಅಂತ.

ವೆಂಕಟಪ್ಪನವರು ಒಬ್ಬ ಸಿದ್ಧಪುರುಷ. ಕಾಯ, ವಾಚಾ, ಮನಸಾ ಬ್ರಹ್ಮಚಾರಿ, ಎಂದೂ ಅಸತ್ಯ ನುಡಿದಿದ್ದಿಲ್ಲ. ಅವರು ಲಲಿತಕಲೆಯ ಭೀಷ್ಮಚಾರ್ಯರಂತೆ ಇದ್ದರು. ಅವರಿಗೆ ಒಂದು ಮನೋಭಿಲಾಷೆ ಇತ್ತು. ಅದೇನೆಂದರೆ ತಮ್ಮ ಚಿತ್ರಶಾಲೆಯನ್ನು ಒಂದು ಕಲಾದರ್ಶನ ಶಾಲೆಯನ್ನಾಗಿ ಪರಿವರ್ತಿಸಬೇಕು ಅಂತ. ಆಗಾಗ್ಗೆ ನನಗೆ ಹೇಳುತ್ತಿದ್ದರು.

ಕೆಲವರು ಹೇಳುತ್ತಿದ್ದರು. ವೆಂಕಟಪ್ಪನವರು ತಮ್ಮ ಕಲಾವಿದ್ಯೆಯನ್ನು ಬೇರೆಯವರಿಗೆ ಹೇಳಿಕೊಡಲು ಒಪ್ಪುತ್ತಿರಲಿಲ್ಲ. ಆದರೆ ಅದು ಹಾಗಲ್ಲ. ಅವರು ಹೇಳಿ ಕೊಡಲು ತಯಾರಾಗಿದ್ದರು. ಆದರೆ ಅವರಿಗೆ ವಿದ್ಯಾತುರವಾದ ಶ್ರದ್ಧೆಯಿಂದ ಕಲಿಯಬೇಕೆನ್ನುವ ವಿದ್ಯಾರ್ಥಿ ಸಿಗಲಿಲ್ಲ.



ಪರ್ಸಿ ಬ್ರೌನ್, ಒಂದು ಮೂರ್ತಿ ಶಿಲ್ಪ Percy Brown - a bust

ಗುರುಕುಲ ಪದ್ಧತಿ ಶಿಕ್ಷಣ ಪಡೆಯಲಿಚ್ಛಿಸುವ ಹೊರಗಣ ತೊಂದರೆ ಅವಾಂತರಗಳಿಲ್ಲದೆ ಗಡುಸಾದ ಶಿಕ್ಷಣ ಪಡೆಯಲು ಅರ್ಹವಾದ ವಿದ್ಯಾರ್ಥಿ ಬೇಕಿತ್ತು ಅವರಿಗೆ.

ವೆಂಕಟಪ್ಪನವರಿಗೆ ಯಾರೂ ಲಲಿತಕಲೆ, ಸಂಗೀತಕಲೆ ಯಾವ ಕಲೆಯಾದರೂ ಸರಿ — ಒಂದು ಉಪವೃತ್ತಿಯಾಗಿ ತೆಗೆದುಕೊಳ್ಳುವುದು ಇಷ್ಟವಿರಲಿಲ್ಲ.

ಒಮ್ಮೆ ಒಬ್ಬರು ವೆಂಕಟಪ್ಪನವರ ಹತ್ತಿರ ವೀಣೆ ಪಾಠ ಕಲಿಯಲು ಬರಬಹುದೇ ಅಂತ ಕೇಳಿದರು. ವೆಂಕಟಪ್ಪನವರು ಅವರನ್ನು ಸ್ವಲ್ಪ ವೀಣೆನುಡಿಸಿ ಅಂದರು. ಸ್ವಲ್ಪ ಆಲಿಸಿದ ಮೇಲೆ ಅವರಿಗೆ ಹೇಳಿದರು "ನೀವು ತಂತಿ ಮೇಲೆ ಬರಿ ಬೆರಳು ಆಡಿಸುವುದನ್ನು ಆರು ತಿಂಗಳು ಅಭ್ಯಾಸ ಮಾಡಿ ನಂತರ ಬನ್ನಿ" ಅಂತ.

1965ನೇ ಇಸವಿ ಮೇ ತಿಂಗಳು 25ನೇ ತಾರೀಖು ವೆಂಕಟಪ್ಪನವರ ಅಳಿಯ ರಾಮರಾಜು ಬೆಳಿಗ್ಗೆ ನನಗೆ ಫೋನ್ ಮಾಡಿದರು. "ವೆಂಕಟಪ್ಪನವರು ನಿಧನರಾದರು" ಅಂತ. ನಾನು ವಿಮಲಾ ಜತೆ ಅವರ ಮನೆಗೆ ಹೋದೆ. 'ಯಾಕೆ ಫೋನ್ ಮೊದಲೇ ಮಾಡಲಿಲ್ಲ" ಅಂದೆ. "ಆಕಸ್ಮಿಕ ಮರಣ ಸಂಭವಿಸಿತು — ನಿಮಗೇ ಮೊದಲು ಫೋನ್ ಮಾಡಿದೆ." ಅಂದರು. ನಾವು ವೆಂಕಟಪ್ಪನವರಿಗೆ ಅಂತಿಮ ಗೌರವ ಸಲ್ಲಿಸಿದೆವು. ನಿಧನರಾಗಿದ್ದಾರೆಂದು ಹೇಳಲು ಸಾಧ್ಯವಿರಲಿಲ್ಲ. ಅದೇ ಗಂಭೀರತೆ, ದಿಟ್ಟತನ — ಅವರ ದೇಹ ಉಡುಪು ಹಾಸಿಗೆ ಹೊದಿಕೆಗಳಲ್ಲಿ ಅದೇ ನೈರ್ಮಲ್ಯತೆ. ಗಾಢವಾದ ನಿದ್ರೆಯಲ್ಲಿದ್ದಾರೇನೋ ಅನ್ನಿಸಿತು. ಆದರೆ ವೆಂಕಟಪ್ಪನವರು ಇನ್ನಿರಲಿಲ್ಲ.

ನನ್ನ ವೈದ್ಯವೃತ್ತಿಯಲ್ಲಿ ಸಾವಿರಾರು ರೋಗಿಗಳಿಗೆ ಚಿಕಿತ್ಸೆನೀಡಿದ್ದೇನೆ. ಆದರೆ ವೆಂಕಟಪ್ಪನವರಂತಹ ವ್ಯಕ್ತಿಯನ್ನು ಕಂಡಿರಲಿಲ್ಲ. ಇನ್ನು ಮುಂದೆ ಕಾಣಲು ಸಾಧ್ಯವೂ ಇಲ್ಲ. ಅವರು ಒಬ್ಬ ಕಾಲ್ಪನಿಕ ವ್ಯಕ್ತಿ, ಮಹಾಪುರುಷ ಯೋಗಿ.

ನನಗೆ ಅವರ ಪರಿಚಯವಾಗಿ ಅವರಿಗೆ ಔಷಧೋಪಚಾರ ಮಾಡಲು ಸಂದರ್ಭ ಸಿಕ್ಕಿದ್ದರಿಂದ, ಅವರು ತಮ್ಮ ನಿಕಟ ಆಪ್ತರಲ್ಲಿ ನನನ್ನು ಒಬ್ಬನನ್ನಾಗಿ ಎಣಿಸಿದ್ದರೆಂದು ನಂಬಿದ್ದೇನೆ. ಇದು ನನ್ನ ಭಾಗ್ಯ

---



ಭಗವಾನ್ ಬುದ್ಧನು ತನ್ನ ಕುದರೆಯಿಂದ ಬೀಳ್ಕೊಡುಗೆ

The Buddha taking leave of his steed

# ವರ್ಣಮಯ ಬದುಕು

ಎಂ.ಎಸ್. ನಂಜುಂಡರಾವ್

"ಜಗತ್ತಿನ ಯಾವುದೇ ಚಿತ್ರಕಲಾ ಮಹಾ ವಿದ್ಯಾಲಯದ ಆಚಾರ್ಯ ಸ್ಥಾನದಲ್ಲಿ ಕೂಡಲು ಕನ್ನಡ ನಾಡಿನ ಕಲಾವಿದ ವೆಂಕಟಪ್ಪನವರು ಅರ್ಹರಾಗಿದ್ದಾರೆ. ಇದು ನನ್ನ ಪ್ರತ್ಯೇಕ್ಷ ಅನುಭವ."

ಹೀಗೆಂದು ಹೇಳಿದವರು ಲಂಡನ್ನಿನ ರಾಯಲ್ ಕಾಲೇಜ್ ಆಫ್ ಫೈನ್ ಆರ್ಟ್ಸ್‌ನ ನಿರ್ದೇಶಕ, ಸರ್ ವಿಲಿಯಂ ರೋಥೇನ್ ಸ್ಟನ್.

ವೆಂಕಟಪ್ಪನವರ ಜೀವಮಾನ ಕರ್ನಾಟಕ ಚಿತ್ರಕಲೆಯ ಸ್ವರ್ಣಯುಗ, ನೂರಾರು ಸುಂದರ ಕಲಾಕೃತಿಗಳು ಸೃಷ್ಟಿಯಾಗಿ, ಹಲವಾರು ಅದ್ಭುತ ಶಿಲ್ಪಗಳು ಉದಯಿಸಿ, ಅರಮನೆ ಗುರುಮನೆ ಸಿಂಗಾರಗೊಂಡ ಕಲಾ ಸಿರಿ ಸಮಯ ಅದು, ಗಂಧದ ಗುಡಿ ಸೊಬಗಿನ ಗುಡಿಯೂ ಆದ ಕಾಲ.

ವೆಂಕಟಪ್ಪನವರದು ವರ್ಣಮಯ ಬದುಕು. ಕಲೆಗಾಗಿ ಜೀವಿತವನ್ನೇ ಸಮರ್ಪಿಸಿಕೊಂಡು ಸಾಧನೆಯಲ್ಲಿ ಸಂಪೂರ್ಣ ಸಿದ್ಧಿ ಪಡೆದು ಕಲಾರಂಗದಲ್ಲಿ ಅಮರರಾಗಿರುವ ದಿವ್ಯ ವರ್ಣ ಶಿಲ್ಪಿ ಅವರು.

ವಿಜಯನಗರ ಸಾಮ್ರಾಜ್ಯ ಪತನದ ತರುವಾಯ ಚಿತ್ರದುರ್ಗಕ್ಕೆ ವಲಸೆ ಬಂದ ಕಲೆಗಾರಿಕೆಯವರ ಕುಲ ಇವರದು. ವೆಂಕಟಪ್ಪನವರ ತಂದೆ ದುರ್ಗದ ಕೃಷ್ಣಪ್ಪನವರು. ಅವರೂ ಉತ್ತಮ ಕಲಾವಿದರು. ಸೋಮವಂಶ ಆರ್ಯ ಕ್ಷತ್ರಿಯ ಪರಂಪರೆ. ದುರ್ಗದ ಕೃಷ್ಣಪ್ಪನವರು ಚಿತ್ರದುರ್ಗ ಪತನದ ತರುವಾಯ ಮೈಸೂರಿಗೆ ಬಂದು ನೆಲೆಸಿದರು. ಅವರಿಗೆ ಅರಮನೆಯ ಚಿತ್ರಗಾರನ ಕಾಯಕ.

ವೆಂಕಟಪ್ಪನವರು 1886ರಲ್ಲಿ ಮೈಸೂರಿನಲ್ಲಿ ಜನಿಸಿದರು. ಇದಕ್ಕೆ ಹಿಂದೆ ಮುಮ್ಮಡಿ ಕೃಷ್ಣರಾಜ ಒಡೆಯರ ಉದಾರ ಆಶ್ರಯ, ಉತ್ತೇಜನದಿಂದ ಆಗ ರಾಜಧಾನಿ ಮೈಸೂರು ಕಲಾವಿದರ ಜೇನುಗೂಡು. ಈ ಆಶ್ರಯ ಅರಮನೆಯ ಉದಾರತೆಯಿಂದ ಮುಂದುವರೆಯುತ್ತಿದ್ದ ಪರಿಸರದಲ್ಲಿ ವೆಂಕಟಪ್ಪನವರ ಬಾಲ್ಯ.

1902ರಲ್ಲಿ ಮೈಸೂರಿನ ಸರ್ಕಾರಿ ಕೈಗಾರಿಕಾ ಲಲಿತ ಕಲಾ ಶಾಲೆಗೆ ಸೇರುವ ತನಕ ಸಾಮಾನ್ಯ ವಿದ್ಯಾಭ್ಯಾಸ. ಭಾರತ ಸಂಸ್ಕೃತಿಯ ಪ್ರತಿರೂಪಗಳಾದ ರಾಮಾಯಣ, ಮಹಾಭಾರತ ಮೊದಲಾದ ಕಾವ್ಯ ಕಥಾನಕಗಳು ಹಾಗೂ ಸಂಸ್ಕೃತ ನಾಟಕಗಳ ಶ್ರವಣ, ಮನನ, ನಡೆದಿತ್ತು. ತಂದೆ ಚಿತ್ರ ರೂಪಿಸುವಾಗ ಕುಳಿತು ವೀಕ್ಷಿಸುತ್ತಿದ್ದ ಇವರಿಗೆ ಬಣ್ಣಗಳ ಹದ, ಅವುಗಳ ಮಿಶ್ರಣ, ಕುಂಚದ ಚಲನೆ ಇವುಗಳ ಪರಿಚಯ ಚೆನ್ನಾಗಿ ಆಗಿತ್ತು. ಮನೆಯೇ ಮೊದಲ ಕಲಾಶಾಲೆ, ಮೈಸೂರಿನ ಅಂದಿನ ಕಲಾ ಚಟುವಟಿಕೆಯ ಪರಿಸರ ಗುರುಕುಲವಾಗಿ ಇವರ ಸಂಸ್ಕಾರದ ಮೇಲೆ ಅಪರೋಕ್ಷ ಪರಿಣಾಮದ ಮುದ್ರೆಯೊತ್ತಿತು.

ಮೈಸೂರಿನ ಕಲಾ ಶಾಲೆಯಲ್ಲಿ ಐದು ವರ್ಷಗಳ ಕಾಲ ವಿಧಿವತ್ತಾದ ಶಿಕ್ಷಣ ಪಡೆದು 1908ರಲ್ಲಿ ಶಾಲೆಯಿಂದ ಬರುವ ವೇಳೆಗೆ ವೆಂಕಟಪ್ಪನವರು ಸಿದ್ಧ ಕಲಾವಿದ. ಈ ಮಧ್ಯೆ ಆಗಿನ ಮದ್ರಾಸ್ ಸರ್ಕಾರದ ಉನ್ನತ ಕಲಾ ಪರೀಕ್ಷೆಗಳಲ್ಲಿ ಪೂರ್ಣವಾಗಿ ಉತ್ತೀರ್ಣರಾದರು.

ವೆಂಕಟಪ್ಪನವರ ಕಲೆಗಾರಿಕೆಗೆ ಮೋಹಿತರಾದ ಅಂದಿನ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ಈ ತರುಣ ಕಲಾವಿದನ ಬಗೆಗೆ ಅಭಿಮಾನ ತಳೆದರು. ಈತನನ್ನು ಕರ್ನಾಟಕದ ಕಲಾರತ್ನವನ್ನಾಗಿ ಬೆಳಗಿಸಬೇಕೆಂದು ಒಡೆಯರು ನಿರ್ಧರಿಸಿ ವೆಂಕಟಪ್ಪನವರನ್ನು ಉನ್ನತ ಕಲಾ ಶಿಕ್ಷಣಕ್ಕಾಗಿ ಕಲ್ಕತ್ತಾ ಕಲಾಶಾಲೆಗೆ ಕಳುಹಿಸಿ ಕೊಟ್ಟರು. ಕಲ್ಕತ್ತೆಗೆ ಹೊರಡುವುದಕ್ಕೆ ಮುನ್ನ ಇವರಿಗೆ ವ್ಯಾವಹಾರಿಕ ಇಂಗ್ಲೀಷಿನ ಶಿಕ್ಷಣವನ್ನು ಕೊಡಿಸಲಾಯಿತು. ಕಲ್ಕತ್ತೆಯ ಕಲಾ ಶಾಲೆಗೆ ಪರ್ಸಿಬ್ರೌನ್ ಪ್ರಾಂಶುಪಾಲರು, ಅವನೀಂದ್ರನಾಥ ಠಾಕೂರರು ಉಪ ಪ್ರಾಂಶುಪಾಲರು.

ಕರ್ನಾಟಕದ ತರುಣ ಕಲ್ಕತ್ತೆಯಲ್ಲಿ ಬಂಗಾಳಿ ಕಲಾವಿದರಿಂದ ಕಲಿತಿದ್ದೂ ಅಪಾರ; ವಿದ್ಯಾರ್ಥಿಯಾಗಿ ಅಲ್ಲಿನವರಿಗೆ ಕಲಿಸಿದ್ದೂ

ಕಮ್ಮಿಯೇನಲ್ಲ. ಅವನೀಂದ್ರನಾಥ ಠಾಕೂರರಿಗೆ ವೆಂಕಟಪ್ಪ ಪರಮ ಶಿಷ್ಯರಾಗಿಬಿಟ್ಟರು. ವೆಂಕಟಪ್ಪನವರಿಗೆ ಅವೀಂದ್ರನಾಥ ಠಾಕೂರರು ದೊಡ್ಡ ಗುರುಗಳಾದರು.

ಏಳು ದೀರ್ಘ ವರ್ಷಗಳ ಕಾಲ ಕಲ್ಕತ್ತೆಯಲ್ಲಿ ಕಲೆಯ ವಿವಿಧ ಸ್ವರೂಪಗಳನ್ನು ಸಾಧಿಸಿಕೊಂಡು ಮೈಸೂರಿಗೆ ಮರಳಿದರು. 1920 ರಲ್ಲಿ ಅಗ್ರಹಾರದ ಸರ್ದಾರ್ ಗೋಪಾಲರಾಜ್ ಅರಸ್‌ರವರ ಮನೆಯಲ್ಲಿ ತಮ್ಮ ಸ್ವಂತ ಸ್ಟುಡಿಯೊ ಆರಂಭಿಸಿದರು. ಮೊದಲೇ ಬೆಳಗಿದ್ದ ಅವರ ಬಣ್ಣದ ಬದುಕು ಅಂದಿನಿಂದ ಪ್ರಜ್ವಲಿಸಲಾರಂಭಿಸಿತು.

ವೆಂಕಟಪ್ಪನವರ ಮೈಸೂರಿನ ಚಿತ್ರಶಾಲೆ ಕಲಾ ಸೃಷ್ಟಿಯ ಕಮ್ಮಟ, ಅವರಿಗಂತೂ ಅದು ಮನೆ-ಮನ ದೇವ ಮಂದಿರ. ದೇವಾಲಯಗಳಲ್ಲಾದರೂ ಮೈಲಿಗೆ ಸಂಭವಿಸಬಹುದು. ಇಲ್ಲಿ ಅದು ಸಾಧ್ಯವೇ ಇಲ್ಲ. ಎಲ್ಲದರಲ್ಲೂ 'ಮಡಿ' ಅಚ್ಚುಕಟ್ಟು. ನಿರ್ದಿಷ್ಟವಾದ ಕಡೆಯಲ್ಲೇ ಪಾದರಕ್ಷೆಗಳನ್ನು ಬಿಡಬೇಕು. ಯಾವ ಯಾವ ವಸ್ತುಗಳಿಗೆ ಯಾವ ಯಾವ ವಸ್ತುಗಳಿಗೆ ಯಾವ ಯಾವ ಸ್ಥಾನ ನೀಡಿದ್ದರೋ ಅವು ಅಲ್ಲಿಂದ ಒಂದು ಅಂಗುಲವೂ ಪಲ್ಲಟವಾಗುವಂತಿಲ್ಲ. ಅವರ ಚಿತ್ರಶಾಲೆಗೆ ಪ್ರವೇಶ ಸುಲಭ ಸಾಧ್ಯವಲ್ಲ; ಯಾರಾದರೂ ಭಕ್ತಿಗಳನ್ನು ಹಿಡಿದು ಅರಮನೆಯ ಪ್ರವೇಶವನ್ನಾದರೂ ಗಿಟ್ಟಿಸಿಕೊಳ್ಳಬಹುದಾಗಿತ್ತು, ಇವರ ಚಿತ್ರಶಾಲೆ ವೀಕ್ಷಣೆಗೆ ಬಲವಾದ ಪ್ರಭಾವವೂ ತಿರುಗು ಬಾಣವಾಗುತ್ತಿತ್ತು, ಅವರು ಕಾರ್ಯನಿರತರಾಗಿದ್ದಾಗ, ಅಂದರೆ ಚಿತ್ರ ರಚನೆಯ ತಪಸ್ಸಿಗೆ ಕುಳಿತಾಗ, ಅವರ ಸ್ಟುಡಿಯೊ ಮುಂದೆ ಒಂದು ಫಲಕ ತೂಗಾಡುತ್ತಿರುತ್ತಿತ್ತು.

"The Studio is closed for public until further notice please do not disturb". ಫಲಕದ ಎಚ್ಚರಿಕೆಯನ್ನು ಉಲ್ಲಂಘಿಸಿ ಬಾಗಿಲು ತಟ್ಟುವ ಧೈರ್ಯ ಯಾರಿಗೂ ಇರಲಿಲ್ಲ.

ಕಲಾವಿದನಿಗೆ ಅವನ ಕಲೆಯೇ ಅವನ ತಂದೆ, ತಾಯಿ, ಸರ್ವಸ್ವ ಆಗಿರಬೇಕೆಂದು ಅವನೀಂದ್ರನಾಥ ಠಾಕೂರರು ಹೇಳುತ್ತಿದ್ದರು. ವೆಂಕಟಪ್ಪನವರು ಗುರು ವಾಕ್ಯಕ್ಕೆ ಬದ್ಧರು ಮಾತ್ರವಲ್ಲ ನಿಷ್ಠರೂ ಆಗಿದ್ದರು.

ಕಲಾವಿದ ವೆಂಕಟಪ್ಪನವರು ಮಾನವ ಆಕೃತಿಯ ಅಧ್ಯಯನದಲ್ಲಿ ಪರಿಪೂರ್ಣರು. ಚಿತ್ರಿತ ವ್ಯಕ್ತಿಗಳ ಸಕಲ ಅಂಗಾಂಗ ಪ್ರಮಾಣ ಬದ್ಧ.. ಅವರ ಪ್ರತಾಪಸಿಂಗ; ಬುದ್ಧ, ಶಂಕರಾಚಾರ್ಯ, ಟಿಪ್ಪೂ, ದಮಯಂತಿ, ಸ್ನಾನಗೃಹದ ಪಾರಸಿಕ ಕನ್ಯೆ, ಈ ಚಿತ್ರಗಳಲ್ಲಿ ವ್ಯಕ್ತಿ ಆಕಾರದ ಅವಲೋಕನದ ಪರಿಣತಿಯನ್ನು ಮನಗಾಣಬಹುದು.

ವೆಂಕಟಪ್ಪನವರು ಸರ್ವತಂತ್ರ ಸ್ವತಂತ್ರ ಮನಸ್ಸಿನ ಕಲಾವಿದರು. ಅಧೀನಕ್ಕೆ ಅವರದು ಅನಾದರ. ಅನ್ಯರ ನಿರ್ದೇಶನದಿಂದ ಧೃತಿ ಹಾಳಾಗುತ್ತದೆ. ಸ್ವತಂತ್ರ ವಾತಾವರಣದಲ್ಲಿ ಸ್ವಂತ ಕಲ್ಪನೆಯಿಂದಲೇ ಕುಂಚ ಆಡಿಸಬೇಕು, ಉಳಿ ಬಡಿಯ ಬೇಕು, ಮಾಧ್ಯಮ ಮೆತ್ತ ಬೇಕೆಂದು ಅವರ ನೀತಿ.

ಒಂದು ದೃಷ್ಟಾಂತ. ಅಂಬಾ ವಿಲಾಸ ಅರಮನೆಯನ್ನು ಚಿತ್ರಗಳಿಂದ, ಕೆತ್ತನೆಗಳಿಂದ ಅಲಂಕರಿಸಬೇಕೆಂದು ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಮನಸ್ಸಾಯಿತು. ಸರಿ ಅರಮನೆಯ ಕಲಾವಿದ ವೆಂಕಟಪ್ಪನವರಿಗೆ ಸನ್ನಿಧಾನದಿಂದ ಕರೆ ಬಂದಿತು. ವೆಂಕಟಪ್ಪನವರು ಅರಮನೆಗೆ ತೆರಳಿ ಸವಾರಿಯವರ ದರ್ಶನ ಪಡೆದರು. ಕಲಾವಿದರ ಯೋಗಕ್ಷೇಮ, ರಚನೆಗಳ ಪ್ರಗತಿಯ ಪ್ರಸ್ತಾವನೆಯಾದ ನಂತರ ಒಡೆಯರು ತಮ್ಮ ಅಪೇಕ್ಷೆಯನ್ನು ಪ್ರಕಟಿಸಿದರು.

"ನೀವು ಈ ಕೆಲಸ ಮಾಡಿಕೊಡಬೇಕು ವೆಂಕಟಪ್ಪ" ಒಡೆಯರು ಸೂಚಿಸಿದರು.



ಕಣ್ವ — ಶಕುಂತಲ, ಉಬ್ಬು ಚಿತ್ರ

Kanva - Shakuntala, a relief

''ಸಂತೋಷದಿಂದ ಮಾಡುತ್ತೇನೆ ಮಹಾಸ್ವಾಮಿ, ಆದರೆ ಒಂದು ನಿಬಂಧನೆಯ ಮೇಲೆ'' ಸನ್ನಿಧಾನದ ಮುಂದೆ ಅಳುಕದೆ ಹೇಳಿದರು ವೆಂಕಟಪ್ಪ.

''ನಮಗೆ ನಿಬಂಧನೆಯೆ?'' ಅವಾಕ್ಕಾಗಿ ಕೇಳಿದರು ಒಡೆಯರು.

''ನಿಬಂಧನೆಗಳು ಸನ್ನಿಧಾನಕ್ಕಲ್ಲ , ಸುಂದರ ಕಲೆಯ ಸೃಷ್ಟಿಗಾಗಿ ಅರಮನೆಯ ಅಲಂಕರಣ ಅದ್ಭುತವಾಗುವುದಕ್ಕಾಗಿ ಅಷ್ಟೇ'' ಸಹಜ ನಗೆಮುಖದಿಂದಲೇ ಹೇಳಿದರು.

''ಏನು ನಿಮ್ಮ ನಿಬಂಧನೆಗಳು?'' ಪೇಚಿಗೆ ಸಿಕ್ಕಿದ್ದ ಒಡೆಯರು ಕೇಳಿದರು.

''ಮಹಾಸ್ವಾಮಿ, ಅಂಬಾವಿಲಾಸವನ್ನು ರಮ್ಯಗೊಳಿಸುವುದಕ್ಕೆ ಕಾಲಮಿತಿ ಹಾಕಬಾರದು, ದರ್ಬಾರು ಸಭಾಂಗಣದಲ್ಲಿ ಯಾವ ಭಾಗಕ್ಕೆ ಯಾವ ಚಿತ್ರ ಹಾಕಬೇಕೆಂಬುದರ ಆಯ್ಕೆ ನನ್ನದೇ ಆಗಿರಬೇಕು, ನಾನು ನನ್ನ ದೈನಂದಿನ ಉಡುಪಿನಲ್ಲೆ ಬಂದು ಹೋಗಬೇಕು, ನಮ್ಮ ಚಿತ್ರ ರಚನೆಯ ಹಾಗೂ ಅಲಂಕರಣ ಕಾರ್ಯದ ಯಾವುದೇ ಹಂತದಲ್ಲೂ ಅರಮನೆಯ ಅಧಿಕಾರಿಗಳು ತಲೆ ಹಾಕಬಾರದು''.

ವೆಂಕಟಪ್ಪನವರು ನಿಧಾನವಾಗಿ ಪಟ್ಟಿಕೊಟ್ಟರು.

ಒಂದು ನಿಮಿಷ ಕಣ್ಣುಚ್ಚಿ ಅಂತರಮುಖಿಗಳಾಗಿದ್ದ ಒಡೆಯರು ಕಣ್ತೆರದು — ''ವೆಂಕಟಪ್ಪ ತಥಾಸ್ತು '' ಎಂದೇ ಬಿಟ್ಟರು.

ಅಂಬಾವಿಲಾಸದ ಅಲಂಕರಣ ಕಾರ್ಯ ಆರಂಭವಾಯಿತು, ಸುಂದರ ಸೃಷ್ಟಿಯ ಮುಕ್ಕಾಲು ಕೆಲಸವನ್ನು ವೆಂಕಟಪ್ಪನವರು ಮುಗಿಸಿದ್ದ ಘಟ್ಟದಲ್ಲಿ ಒಡೆಯರು ವಿಧಿವಶರಾದ್ದರಿಂದ ಆ ಕಲಾಕಾರ್ಯ ಅಪೂರ್ಣವಾಗಿ ಬಿಟ್ಟಿತು.

## ನಿಸರ್ಗ ಪ್ರಿಯ

ವೆಂಕಟಪ್ಪನವರು ನಿಸರ್ಗಭಕ್ತರು; ಅವರಿಗೆ ಪ್ರಕೃತಿಯ ಆಳವಾದ ಪರಿಚಯವಿತ್ತು . ಪ್ರಕೃತಿಯ ಸೌಮ್ಯ ಮುಖವೇ ಅವರಿಗೆ ಮೆಚ್ಚು . ನಿಸರ್ಗದ ಉಗ್ರ ಮುಖ ಅವರ ರಚನೆಗಳಲ್ಲಿ ಹೆಚ್ಚು ಕಂಡು ಬಂದಿಲ್ಲ . ಪರ್ವತ, ಗಿರಿ, ಗುಡ್ಡ , ಕಾಡು, ಮೇಡು, ಮೋಡ, ಮಳೆ, ಸೂರ್ಯೋದಯ, ಸೂರ್ಯಾಸ್ತ , ವನ್ಯಮೃಗಗಳು, ಸಾಧು ಜಿಂಕೆ, ದನ, ಕರು, ನವಿಲು, ಜಿಂಕೆ — ಹೀಗೆ ಪ್ರಕೃತಿಯ ಸ್ಥಿತಿ, ಸ್ವಭಾವಗಳನ್ನು ಅವರು ಆಳವಾಗಿ, ವಿಸ್ತಾರವಾಗಿ ಕಂಡಿದ್ದರು; ಮನಸ್ಸಿಗೆ ತುಂಬಿಕೊಂಡು ಕುಂಚದಿಂದ ಪ್ರತಿಬಿಂಬಿಸಿದ್ದರು. ನಿಸರ್ಗದಲ್ಲಿ ಸಿದ್ಧಹಸ್ತ ಈ ಕಲಾವಿದರು. ಇವರ ಪ್ರಕೃತಿ ಚಿತ್ರಗಳು ಮನಮೋಹಕ. ಆ ಚಿತ್ರಗಳು ಚಿತ್ರಿತವಾದ ಸ್ಥಳಕ್ಕೆ ನಾವು ಬಂದು ನಿಂತಿದ್ದೇವೋ ಅನ್ನುವಷ್ಟು ನೈಜತೆ ಇದ್ದ ಕಣ್ಣುನೋಟವನ್ನು ತೆಗೆಯುವುದಕ್ಕೆ ಮುಜಗರ. ನೋಡುವುದನ್ನು ನಿಲ್ಲಿಸಿದರೆ ಆ ಸುಂದರ ತಾಣದಿಂದ ವಂಚಿತರಾಗುತ್ತೇವೆಂಬ ಭ್ರಮೆ.

ಉದಕಮಂಡಲದ (ಊಟಿ) ಸರಸ್ಸುಎಲ್ಕ್ ಬೆಟ್ಟದ ಹಾದಿ, ಮಳೆಗಾಲ ಮುಗಿದ ನಂತರ, ಸೂರ್ಯೋದಯ, ಕೊಡೈಕೆನಾಲ್‌ನ ಬ್ರಾಯಂಟ್ ಉದ್ಯಾನ, ಬೇರೆ ಶೋಲಾ ಗಿರಿಶ್ರೇಣಿ, ಅವರ ಅದ್ಭುತ ರಮ್ಯ ನಿಸರ್ಗ ಚಿತ್ರಗಳು. 'ಕುವೆಂಪು ಪ್ರಣೀತ' 'ರಾಮಾಯಣದರ್ಶನಂ' ನಲ್ಲಿ ಶ್ರೀರಾಮ ಅಡವಿಯಲ್ಲಿ ಲಕ್ಷ್ಮಣನಿಗೆ ಹೇಳುವ ಮಾತಿದೆ:

''ದಾರಿದ್ರಮಲ್ತೆ ಆನಾಗರೀಕ ಜೀವನಂ ಈ ವನ್ಯ ಸಂಸ್ಕೃತಿಯ ಮುಂದೆ'' ವೆಂಕಟಪ್ಪನವರ ನಿಸರ್ಗ ಚಿತ್ರ ನೋಟಕರಿಗೆ ಈ ಸಾಲು ನೆನಪಿಗೆ ಬಂದೇ ಬರುತ್ತದೆ.

‘ಉದಕ ಮಂಡಲದಲ್ಲಿ ಸೂರ್ಯಾಸ್ತ’ ಇದು ವೆಂಕಟಪ್ಪನವರು ರಚಿಸಿದ ಕಟ್ಟ ಕಡೆಯ ಪ್ರಕೃತಿ ಚಿತ್ರ.

ಒಮ್ಮೆ ಕನ್ನಡ ನಾಡಿನ ಕವಿಯೊಬ್ಬರು ವೆಂಕಟಪ್ಪನವರ ಮನೆಗೆ ಬಂದು ಚಿತ್ರ ನೋಡುತ್ತಿದ್ದರು. ಅಲ್ಲಿದ್ದ ಶಿವತಾಂಡವ ಚಿತ್ರದ ಬಳಿ ಕವಿಗಳು ವೆಂಕಟಪ್ಪನವರನ್ನು ಹೊಗಳಿದ್ದೇ ಹೊಗಳಿದ್ದು. ವರ್ಣನೆಯ ಗುಂಗಿನಲ್ಲಿ ಅನೇಕ ಶ್ಲೋಕಗಳನ್ನು ಹೇಳುತ್ತಿದ್ದರು. ಏಕೋ ಏನೋ ವೆಂಕಟಪ್ಪನವರಿಗೆ ಇದು ಹಿಡಿಸಲಿಲ್ಲ. ಆಗ ಅವರು ಕವಿವರ್ಯರನ್ನು ಕರೆದುಕೊಂಡು ಹೋಗಿ ಮನೆಯ ಹೊರಗೆ ಬಿಟ್ಟು ದಡಾರನೆ ಬಾಗಿಲು ಹಾಕಿಕೊಂಡರು.

ನಾಲ್ವಡಿ ಕೃಷ್ಣರಾಜರು ವೆಂಕಟಪ್ಪನವರನ್ನು ಸನ್ಮಾನಿಸಬೇಕೆಂದು ಬಿಕ್ಷಿಯವರ ಮುಖಾಂತರ ಹೇಳಿಕಳುಹಿಸಿದರು. ಆದರೆ ವೆಂಕಟಪ್ಪನವರು ಬೇಡವೆಂದರು. ಇದನ್ನು ಕೇಳಿದ ಮಹಾರಾಜರು ದೇಶದಲ್ಲಿ ತಾನು ಕೊಡಮಾಡುವ ಸನ್ಮಾನವನ್ನು ಬೇಡವೆನ್ನುವ ವ್ಯಕ್ತಿಯೊಬ್ಬನಿದ್ದಾನೆ ಎಂದು ಅಭಿಮಾನ ಪಟ್ಟರು.

ವೆಂಕಟಪ್ಪನವರ ಕಲೆಗಾರಿಕೆಯಲ್ಲಿ ಉಗ್ರತೆ ಕಂಡು ಬರುವುದಿಲ್ಲ. ವಸ್ತು ವರ್ಣಗಳಲ್ಲಿ ಶಾಂತತೆ, ಸೌಮ್ಯ, ಕಲಾವಿದ ಬಣ್ಣದಲ್ಲಿ ತುಂಬಿದ ಭಾವ, ಪ್ರಭಾವ ನೇರವಾಗಿ ನೋಟಕನ ಹೃದಯಕ್ಕೆ ಮನಸ್ಸಿಗೆ ನಾಟಿ, ವಸ್ತು ಸುಲಭವಾಗಿ ಮನಸ್ಸಿಗೆ ಬೋಧೆಯಾಗುತ್ತದೆ. ಅವರ ಚಿತ್ರಗಳು, ಅವರ ಶಿಲ್ಪಗಳು ಅವರ ಜೀವಿತದಂತೆಯೇ ಅದ್ಭುತ, ಅದ್ದೂರಿ, ಸುಂದರ, ಸುಸ್ಪಷ್ಟ.

ವೆಂಕಟಪ್ಪನವರು ರಚಿಸಿದ ಮೋದಕ ಗಣಪತಿ ಮತ್ತು ಮಹಾ ಶಿವರಾತ್ರಿ ಜಲವರ್ಣ ಚಿತ್ರಗಳು ತುಂಬಾ ಸೊಗಸಾದವು. ಚಿತ್ರದ ಹೆಸರೇ ಸೂಚಿಸುವಂತೆ ಭಕ್ಷ್ಯ ಪ್ರಿಯನಾದ ಗಣಪತಿ ನೈವೇದ್ಯಕ್ಕಿಟ್ಟ ಮೋದಕ (ಕಡುಬು)ಗಳ ಮೇಲೆ ಒಲವಿನ ದೃಷ್ಟಿ ಹರಿಸಿದ್ದಾನೆ.

“ಮಹಾ ಶಿವರಾತ್ರಿ” ರಮ್ಯ ಶಾಂತ ಚಿತ್ರ. ಶಿವಾಲಯದ ಪ್ರವೇಶದ್ವಾರ, ಅದೇ ತಾನೇ ಮಿಂದು ಮಡಿಯುಟ್ಟು, ಹೂ ಮುಡಿದು, ಪೂಜಾಪರಿಕರಣಗಳ ತಟ್ಟೆಯನ್ನು ಹಿಡಿದು ಶಿವಭಕ್ತೆ, ಗೃಹಿಣಿಯೊಬ್ಬಳು ಶಿವ ಮಂದಿರವನ್ನು ಪ್ರವೇಶಿಸುತ್ತಿದ್ದಾಳೆ. ಎವೆ ಹಾಕದೆ ನೋಡುತ್ತಿದ್ದರೆ ನಾವೂ ಶಿವಾಲಯದಲ್ಲಿ ಆಕೆಯ ಪಕ್ಕದಲ್ಲಿ ನಿಂತಿರುವಂತೆ ಮನಸ್ಸಿಗೆ ಬೋಧೆಯಾಗಿ ಹೃದಯ ಧನ್ಯತೆಯ ಭಾವ ಅನುಭವಿಸುತ್ತದೆ. ಸನ್ನಿವೇಶವಂತೂ ಅತ್ಯದ್ಭುತ. ಶಿವರಾತ್ರಿಯ ಪವಿತ್ರ ಭಕ್ತಿ ಪರವಶತೆಯ ಕ್ಷಣವನ್ನು ಚಿತ್ರದಲ್ಲಿ ಮೂಡಿಸಿದ್ದಾರೆ.

ವೆಂಕಟಪ್ಪನವರು ಸಿದ್ಧ ಚಿತ್ರಗಾರರಂತೆಯೇ ಉತ್ಕೃಷ್ಟ ಶಿಲ್ಪಿ ಮತ್ತು ಸೂಕ್ಷ್ಮಕೆತ್ತನೆಯ ಕಲಾವಿದರು. ಪ್ಲಾಸ್ಟರ್ ಮಾಧ್ಯಮದಲ್ಲಿ ಇವರು ಮೂಡಿಸಿರುವ ವೀಣೆ ಶೇಷಣ್ಣನವರು, ರವೀಂದ್ರನಾಥ ಠಾಕೂರರು, ಶಿವ ತಾಂಡವ, ಬಾಲಕ, ಶಾಕುಂತಲೆಯ ಬೀಳ್ಕೊಡುಗೆ ಶಿಲ್ಪಗಳು ಜೀವಂತ ಕಳೆಯಿಂದ ಕೂಡಿದ ಅಮರ ಕೃತಿಗಳು.

ವೆಂಕಟಪ್ಪನವರು ಶೇಷಣ್ಣನವರ ಶಿಲ್ಪವನ್ನು ಮುಗಿಸಿ ಅವರ ಮನೆಗೆ ತೆಗೆದುಕೊಂಡು ಹೋಗಿ ಇಟ್ಟರು. ಅವಲೋಕನ ನಡೆಯುತ್ತಿದ್ದಾಗ ಶೇಷಣ್ಣನವರ ಪುಟ್ಟ ಮೊಮ್ಮಗಳು ಅಲ್ಲಿಗೆ ಬಂದು ಶಿಲ್ಪ ನೋಡಿ, ‘ನಮ್ಮನೆಗೆ ಇನ್ನೊಂದು ತಾತಾ ಬಂದಿದೆ’, ಎಂದು ಕೈ ಚಪ್ಪಾಳೆ ಹಾಕುತ್ತ ಕುಣಿಯುತ್ತ ನಿಂತು ಬಿಟ್ಟಿತಂತೆ.

ಶಾಕುಂತಲೆಯ ಬೀಳ್ಕೊಡುಗೆ ಕಣ್ವರು ಹರಸುತ್ತಿದ್ದಾರೆ. ಗಂಡನ ಮನೆಗೆ ತೆರಳುವ ತವಕದ ಶಾಕುಂತಲೆ ಸಾಕುತಂದೆಗೆ ಕೈ ಮುಗಿದು ತಲೆ ಬಾಗಿದ್ದಾಳೆ. ಒಡತಿಯ ಅಗಲಿಕೆ ಅರಿವಾದ ಹರಿಣಿ ವ್ಯಾಕುಲಗೊಂಡಿದೆ. ಈ ಉಬ್ಬೆತ್ತಿನ ಶಿಲ್ಪನೋಡುತ್ತಿದ್ದರೆ, ಮದುವೆಯ ನಂತರ ಹೆಣ್ಣು ಒಪ್ಪಿಸಿಕೊಡುವ ಸಂದರ್ಭದ ಅನುಭವ ತಟ್ಟಿ ಕಣ್ಣು ತೇವವಾಗದಿರದು.



ಮೋದಕ ಗಣಪ

Modaka Ganapa

ಸಿದ್ಧಾರ್ಥನ ರಾಜ್ಯ ಪರಿತ್ಯಾಗ ಇನ್ನೊಂದು ಪ್ಲಾಸ್ಟರ್ ಉಬ್ಬೆತ್ತಿನ ಶಿಲ್ಪ. ಜಗತ್ತಿನ ನಶ್ವರತೆ, ನೋವು ಕಂಡು ಭಾವನಾ ಪರವಶರಾಗಿ ಸಿದ್ಧಾರ್ಥ ಬುದ್ಧನಾಗಲು ನಡುರಾತ್ರಿ ಅರಸಿಯನ್ನು, ಅರಮನೆಯನ್ನು ತ್ಯಜಿಸಿ ಹೊರಟಿದ್ದಾನೆ. ''ಎಂದಿನಂತಿಲ್ಲವಲ್ಲ ಇಂದು'' ಎಂದು ಅವನ ಕುದುರೆಯ ಕಂಗಳೂ ತೇವಗೊಂಡಿದೆ. ಇದರ ವೀಕ್ಷಣೆ ಅದೊಂದು ರಸಾನುಭವ, ವರ್ಣನಾತೀತ.

ಅಂದಿನ ಒಂದು ಕಾಸಿನ ಅಗಲದ ದಂತದಲ್ಲಿ ಯುವರಾಜರನ್ನು ಚಿತ್ರಿಸಿದ ಒಂದು ಸೂಕ್ಷ್ಮ ಕೃತಿ ರಚಿಸಿ ಕೊಟ್ಟಿದ್ದರಂತೆ. ಅದನ್ನು ಯುವರಾಜರು ತಮ್ಮ ಪ್ರಿಯರೊಬ್ಬರಿಗೆ ಕೊಟ್ಟು ಇನ್ನೊಂದು ಅಂತಹಾ ಕೃತಿಯನ್ನು ಮಾಡಿಕೊಡಲು ಕೇಳಿದಾಗ, ಈ ಕಲಾವಿದ ಕಟ್ಟುನಿಟ್ಟಾಗಿ ನಿರಾಕರಿಸಿದ್ದರಂತೆ.

ಅವರ ''ಅರ್ಧನಾರೀಶ್ವರ'' ಅವರ ಇನ್ನೊಂದು ಅಮೋಘ ಚಿತ್ರ, ವಿದೇಶದಿಂದ ಬಂದಿದ್ದ ದೊರೆಯೊಬ್ಬ ಅದನ್ನು ಅತಿಯಾಗಿ ಮೆಚ್ಚಿಕೊಂಡಿದ್ದನಂತೆ.

## ನಾದೋಪಾಸನೆ

ವೆಂಕಟಪ್ಪನವರ ಇನ್ನೊಂದು ಪ್ರತಿಭೆಯ ಮುಖ — ನಾದೋಪಾಸನೆ.

ಇವರು ಪಳಗಿದ ವೈಣಿಕರು. ವೀಣಾವಾದನದಲ್ಲಿ ಸಂಗೀತ ಶಾರದೆಯನ್ನು ಆವಿರ್ಭವಿಸಿ ಬಗೆ ಬಗೆಯ ರಾಗಗಳ ನಾದ ತರಂಗಗಳನ್ನು ಹರಿಸಿ ಮೈಮರೆಯುತ್ತಿದ್ದ ರಾಗಜೀವಿ. ಶೇಷಣ್ಣನವರ ಬಳಿ ಇವರ ವೀಣಾ ಕಲಿಕೆ. ಅವರು ಸಂಗೀತ ಸಾರ್ವಭೌಮ, ಇವರು ಕಲಾ ಸಾಮ್ರಾಟ, ಎಂತಹ ಸಮ್ಮಿಳನ, ಸಂಗೀತ ರಸಗಂಗೆಯಾಗಿ ಹರಿಯದೆ ಇನ್ನೇನು?

ವಾದನಕ್ಕಾಗಿ ವೆಂಕಟಪ್ಪನವರು ವಿಶೇಷವಾದ ವೀಣೆಯನ್ನು ಮಾಡಿಕೊಂಡಿದ್ದರು. ಚಿತ್ರ ಬರೆಯಲು ಕುಂಚ ಹಿಡಿದ ಅವರ ಕೈಬೆರಳುಗಳು ವೀಣೆಯ ತಂತಿ ಸಾಲುಗಳ ಮೇಲೆ ಪಾದರಸದಂತೆ ಲಾಸ್ಯವಾಡಿ ನಾದ ತರಂಗಗಳನ್ನೆಬ್ಬಿಸಿ ಶ್ರಾವಕರನ್ನು ಆನಂದ ಸಾಗರದಲ್ಲಿ ಮಜ್ಜನ ಮಾಡಿಸುತ್ತಿದ್ದುವಂತೆ.

ಮೈಸೂರಿನಲ್ಲಿ ಅರಸೊತ್ತಿಗೆಯ ಕಾಲ ಮುಗಿಯುವುದಕ್ಕೆ ಬಹು ಹಿಂದೆಯೇ ವೆಂಕಟಪ್ಪನವರು ಬೆಂಗಳೂರಿಗೆ ಬಂದು ನೆಲಸಿಬಿಟ್ಟರು. ಮಲ್ಲೇಶ್ವರದ ಹದಿನೆಂಟನೆಯ ಅಡ್ಡ ರಸ್ತೆಯಲ್ಲಿ ನಿವೇಶನ ಕೊಂಡು ಮನೆ ಕಟ್ಟಿಸಿಕೊಂಡು ವಾಸಿಸತೊಡಗಿದರು.

ಮಧುಚಂದ್ರವನ್ನೇ ಕಾಣದ ನೈಷ್ಠಿಕ ಬ್ರಹ್ಮಚಾರಿ, ಆಪ್ತರ ಸಲಹೆಯನ್ನು ಮಾನ್ಯ ಮಾಡದೆ ಅವಿವಾಹಿತರಾಗಿಯೇ ಉಳಿದ ಈ ಕಲಾವಿದನಿಗೆ ಕಲೆಯೇ ಸರ್ವಸ್ವ, ವೀಣಾವಾದನವೇ ಆತ್ಮಾನಂತದದ ಮನರಂಜನೆ, ಕಲಾಪ್ರಪಂಚವೇ ಸಂಸಾರ, ಇವರು ಕಲ್ಕತ್ತೆಯಲ್ಲಿದ್ದಾಗ ಹಿಮಾಲಯದ ಪ್ರದೇಶದಲ್ಲೆಲ್ಲಾ ಸಂಚರಿಸಿ ಪರ್ವತಪ್ರಕೃತಿಯನ್ನು ದರ್ಶಿಸುತ್ತಿದ್ದ ಕಾಲದಲ್ಲಿ ಹೃಷಿಕೇಶಕ್ಕೂ ಭೇಟಿ ನೀಡಿ ಸ್ವಾಮಿ ಶಿವಾನಂದರನ್ನು ಸಂದರ್ಶಿಸಿದ್ದರಂತೆ. ಅದರ ಪ್ರಭಾವ ಇವರ ಮೇಲೆ ಮುದ್ರಿತವಾಗಿ ಅಜೀವ ಪರ್ಯಂತ ಬ್ರಹ್ಮಚರ್ಯ ಆಚರಿಸಲು ನಿರ್ಧರಿಸಿದರೆಂದು ಬಲ್ಲವರು ಹೇಳುತ್ತಾರೆ.

ಬ್ರಹ್ಮಚರ್ಯೆ ಒಂದು ವ್ರತವಾದರೆ ವೆಂಕಟಪ್ಪನವರು ಪರಿಪಾಲಿಸುತ್ತಿದ್ದ ಇನ್ನೊಂದು ವ್ರತ ''ಅಪರಿಗ್ರಹ ವ್ರತ'', ಅಂದರೆ ಕಾಸು ಕೊಡದೆ ಏನನ್ನೂ ಸ್ವೀಕರಿಸದಿರುವುದು ಇವರು ಯಾರಾದರೂ ಮನೆಗೆ ಹೋದಾಗ ಹಣ್ಣು ಕೊಟ್ಟರೆ, ಹಾಲು ಕೊಟ್ಟರೆ ಸ್ವೀಕರಿಸಿ ಹೊರಡುವಾಗ ಚಾಪೆಯ ಮೇಲೋ, ಮೇಜಿನ ಮೇಲೋ ದುಡ್ಡು ಇಟ್ಟು ಬಂದು ಬಿಡುತ್ತಿದ್ದರು.

ವೆಂಕಟಪ್ಪನವರು ಖಂಡಿತವಾದಿ. ತುಂಬಾ ಶಿಸ್ತು, ಎಂದಿಗೂ ಅನ್ಯಾಯವನ್ನು ಸಹಿಸುತ್ತಿರಲಿಲ್ಲ. ಇವರು ಕಲ್ಕತ್ತೆಯಲ್ಲಿರುವಾಗ ಶ್ರೀ ರಾಮಕೃಷ್ಣ ಮಠ ಇವರ ಜಲವರ್ಣದ ಕೃತಿಯೊಂದನ್ನು ಚಿತ್ರ ತೆಗೆದು ಪಡಿಯಚ್ಚು ಮಾಡಿಸಿ ಪತ್ರಿಕೆಯೊಂದರಲ್ಲಿ ಪ್ರಕಟಿಸಿತು. ಪಡಿಯಚ್ಚು ದೋಷವೋ ಅಥವಾ ಇನ್ನೇನು ಲೋಪವೋ ಮುದ್ರಿತ ಸಂಚಿಕೆಯ ಚಿತ್ರದಲ್ಲಿ ಇವರ ಶ್ರೀರಾಮನ ಜನಿವಾರ ಬಲದಿಂದ ಎಡಕ್ಕೆ ಹೋಗಿತ್ತು. ಚಿತ್ರಗಾರನೇ ಹೀಗೆ ತಪ್ಪಾಗಿ ಚಿತ್ರಿಸಿರುವನೆಂದು ಜನ ತಪ್ಪು ತಿಳಿದಾರೆಂದು ಕೆರಳಿದ ವೆಂಕಟಪ್ಪನವರು ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿದರು. ವಿಚಾರಣೆಯಾಗಿ ಅದು ತಾಂತ್ರಿಕ ದೋಷವೆಂದು ಸಿದ್ಧಪಟ್ಟರೂ ಕಲಾವಿದನಿಗೆ ಸಮಾಧಾನವಾಗಲೆಂದು ಕೋರ್ಟು ಇವರ ಪ್ರತಿ ಕಕ್ಷಿಗೆ ಸಾಂಕೇತಿಕವಾಗಿ ಒಂದು ರೂಪಾಯಿ ಜುಲ್ಮಾನೆ ವಿಧಿಸಿತು.

ಮೈಸೂರಿನಲ್ಲಿ ಇನ್ನೊಂದು ಇಂತಹುದೇ ಪ್ರಕರಣ ಅರಸೊತ್ತಿಗೆಯ ವಿರುದ್ಧವೇ ದಾವಾ ಹಾಕಿದರು. ಸರಿ ವಿಚಾರಣೆ ನಡೆಯಿತು. "ಮಹಾರಾಜರ ಮೇಲಿನ ದಾವಾದಲ್ಲಿ ಸಿಂಧುತ್ವವಿಲ್ಲ" ಎಂಬ ಕಾರಣದ ಮೇಲೆ ನ್ಯಾಯಾಧೀಶರು ಕೇಸ್‌ನ್ನು ವಜಾ ಮಾಡಿದರು.

ವೆಂಕಟಪ್ಪನವರು ಪರಂಪರೆಗೆ ನಿಷ್ಠರು, ಭಾರತೀಯ ಸಂಸ್ಕೃತಿಗೆ ಪರಮಬದ್ಧರು ಅವರು ತಮ್ಮ ಜಲವರ್ಣ ಚಿತ್ರಗಳಿಗೆ ಸಾಮಾನ್ಯವಾಗಿ ರಾಮಾಯಣ, ಮಹಾಭಾರತದ ವಸ್ತುಗಳನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದರು. ಈ ಚಿತ್ರಗಳಲ್ಲಿ ಕಣ್ತಣಿಸುವ ಬಣ್ಣಗಳ ಹಬ್ಬ ಮನಸ್ಸಿನಲ್ಲಿ ಬಹುಕಾಲ ಉಳಿವ ದಿವ್ಯ ಪ್ರಭಾವ.

ವೆಂಕಟಪ್ಪನವರು ಕಂಡದ್ದನ್ನು ಕಂಡಂತೆ ಆಡಿ ಬಿಡುವ ಸ್ವಭಾವ, ವಿನಾ ಕಾರಣದ ಹೊಗಳಿಕೆಗೆ ಸಿಟ್ಟು ಮಾಡಿಕೊಳ್ಳುತ್ತಿದ್ದರು. ಇವರ ಈ ಸ್ವಭಾವವನ್ನು ಅರ್ಥಮಾಡಿಕೊಳ್ಳದವರು ಅವರನ್ನು ಸಮಸ್ಯಾ ವ್ಯಕ್ತಿ ಎಂದೇ ತಿಳಿದು ಕೊಳ್ಳುತ್ತಿದ್ದರು. ಈ ಸ್ವತಂತ್ರ ಜೀವಿ ಯಾವುದಕ್ಕೂ ಅಳುಕುತ್ತಿರಲಿಲ್ಲ. ಲೌಕಿಕ ಲಾಭಕ್ಕಾಗಿ ಆತ್ಮಗೌರವವನ್ನು ಬಲಿಕೊಟ್ಟವರೇ ಅಲ್ಲ.

ಕೆ.ಸಿ. ರೆಡ್ಡಿಯವರು ಮುಖ್ಯಮಂತ್ರಿಯಾಗಿದ್ದ ಸಮಯದಲ್ಲೊಮ್ಮೆ ಅಂದಿನ ಪ್ರಧಾನಿ ಜವಾಹರಲಾಲ್ ನೆಹರೂ ಬೆಂಗಳೂರಿನಲ್ಲೊಂದು ಸಮಾರಂಭಕ್ಕೆ ಬಂದಿದ್ದರು. ವೆಂಕಟಪ್ಪನವರ ಬಗ್ಗೆ, ಅಪಾರ ಆಸಕ್ತಿ ಗೌರವ ಇಟ್ಟುಕೊಂಡಿದ್ದ ನೆಹರೂ ವೆಂಕಟಪ್ಪನವರ ಚಿತ್ರಶಾಲೆಗೆ ಭೇಟಿ ಕೊಡಲು ವೇಳೆ ನಿಗದಿ ಮಾಡಿಸಿ ಹೇಳಿ ಕಳುಹಿಸಿದ್ದರು. ವೆಂಕಟಪ್ಪನವರು ಹಣ್ಣಿನ ತಟ್ಟೆ ಹಾರ ತುರಾಯಿಗಳೊಡನೆ ಚಿತ್ರಶಾಲೆಯ ಮುಂದೆ ಸ್ವಾಗತಿಸಲು ಕಾದಿದ್ದರು.

ನಿಗದಿಯಾದ ಸಮಯ ಮೀರಿ ಬಹು ಹೊತ್ತಾದರೂ ನೆಹರೂ ಬರಲಿಲ್ಲವಾಗಿ ಕೋಪಗೊಂಡ ಅವರು ಮನೆಗೆ ಬೀಗ ಹಾಕಿಕೊಂಡು ರಂಗಸ್ವಾಮಿ ಗುಡಿ ಬೀದಿಯ ತಮ್ಮ ಸ್ನೇಹಿತರೊಬ್ಬರ ಮನೆಗೆ ಹೊರಟು ಹೋದರು. ಮಧ್ಯಾಹ್ನ ನೆಹರೂಗೆ ನೆನಪಾಗಿ ಏಕೆ ಕಾರ್ಯಕ್ರಮ ತಪ್ಪಿದರೆಂದು ಸಂಬಂಧಿಸಿದವರ ಮೇಲೆ ರೇಗಾಡಿ ಈಗಲೇ ಹೊರಡೋಣ ನಡೆಯಿರಿ ಎಂದು ಕರೆದುಕೊಂಡು ಹೊರಟರು. ವೆಂಕಟಪ್ಪನವರ ಮನೆಯ ಮುಂದೆ ಭಾರತ ಪ್ರಧಾನಿಯ ಕಾರು ಬಂದು ನಿಂತಿತು. ನೆಹ್ರೂ ಇಳಿದು ಮನೆ ಮುಂದೆ ಹೋದರು. ಬಾಗಿಲಿಗೆ ದೊಡ್ಡ ಬೀಗ ಬಡಿದಿತ್ತು. ಸಮಯ ಪಾಲಿಸದ ಪ್ರಧಾನಿಯ ಮೇಲೆ ಕಲಾವಿದ ಕೋಪಿಸಿಕೊಂಡಿದ್ದಾನೆಂದು ನೆಹ್ರೂಗೆ ಅರ್ಥವಾಯಿತು. ಆದ ಅನಾಹುತಕ್ಕಾಗಿ ಮುಖ್ಯಮಂತ್ರಿಗಳು ಬೆವತರು. ಉಳಿದ ಅಧಿಕಾರಿಗಳಿಗಂತೂ ನಡುಕ, ನೆಹ್ರೂ ಮುಖದಲ್ಲೆ ರೋಷ ಪ್ರಕಟಿಸಿ ಕಾರು ಹತ್ತಿದರು.

ಬಿಳಿಯ ಕಚ್ಚೆಯ ಪಂಚೆ ಕ್ಲೋಸ್ ಕಾಲರಿನ ಕೋಟು. ಮೈಸೂರು ಪೇಟ ದಪ್ಪದಾದ ಮೀಸೆ. ಹಣೆಯಲ್ಲಿ ಸಣ್ಣದಾದ ತಿಲಕ ಇದು ಈ ಕಲಾವಿದನ ದೈನಂದಿನ ಬದಲಾಗದ ರೀತಿಯ ಉಡುಪು.

ಕೇಂದ್ರ ಲಲಿತ ಕಲಾ ಅಕಾಡೆಮಿ ವೆಂಕಟಪ್ಪನವರಿಗೆ ಫೆಲೋಷಿಪ್ ನೀಡಿ ಗೌರವಿಸಿತ್ತು. ರಾಜ್ಯ ಅಕಾಡೆಮಿಯೂ ಇವರನ್ನು ಸನ್ಮಾನಿಸಿ

ಪ್ರಶಸ್ತಿ ನೀಡಿತ್ತು. ಕರ್ನಾಟಕ ಚಿತ್ರಕಲಾ ಪರಿಷತ್ ವಿಶೇಷ ಸಮಾರಂಭ ನಡೆಸಿ ಗೌರವಿಸಿತು.

ವೆಂಕಟಪ್ಪನವರ ಅನೇಕ ಕೃತಿಗಳನ್ನು ಕಲಾಸಕ್ತರು ಕೊಂಡಿದ್ದಾರೆ,ಅವರ ಕೃತಿಗಳು ದೇಶ ವಿದೇಶದ ನಾನಾ ಕಡೆಗಳಲ್ಲಿ ಇಂದಿಗೂ ರಾರಾಜಿಸುತ್ತಿವೆ.

ಬದುಕಿನ ಹಗಲನ್ನು ಮುಗಿಸಿ ಜೀವನ ಸಂಧ್ಯಾಗೆ ಬಂದ ಈ ಕಲಾವಿದ ಹೆಚ್ಚಾಗಿ ಮನೆಯಲ್ಲೇ ಇರುತ್ತಿದ್ದರು. ಸೋದರ ಅಳಿಯ ರಾಮರಾಜು ಯೋಗಕ್ಷೇಮ ನೋಡಿ ಕೊಳ್ಳುತ್ತಿದ್ದರು. ವೆಂಕಟಪ್ಪನವರು ಆಗ ಬಹು ಅಪರೂಪವಾಗಿ ಮನೆಯಿಂದ ಹೊರಬರುತ್ತಿದ್ದರು.

ಈ ಮಹಾನ್ ಕಲಾವಿದರು ಅರವತ್ತೈದನೆ ಮೇ ಮಾಹೆ ಇಪ್ಪತ್ತೈದರ ಮಂಗಳವಾರ ಕಾಲಕ್ಕೆ ತಲೆಬಾಗಿ ವಿಧಿವಶರಾದರು, ಆಗ ಅವರಿಗೆ ಎಪ್ಪತ್ತರ ಮುಪ್ಪು.

ಬಣ್ಣದಲ್ಲಿ ಭಾವವನ್ನು ಬಣ್ಣಿಸಿ ಬಣ್ಣದ ಲೋಕವನ್ನೇ ಬೆರಗುಗೊಳಿಸಿದ ಕನ್ನಡದ ಈ ಕಲಾವಿದ ಲೋಕಮಾನ್ಯ ಪುರುಷ.

---

# ಆದರ್ಶ ಜೀವಿ

ಪಿ.ಆರ್. ತಿಪ್ಪೇಸ್ವಾಮಿ

ಪ್ರಸಿದ್ಧ ಕಲಾವಿದರಾಗಿದ್ದ ಕೆ. ವೆಂಕಟಪ್ಪನವರನ್ನು ಗೌರವಿಸುವ, ಅವರ ಕಲಾಕೃತಿಗಳನ್ನು ವೀಕ್ಷಿಸುವ ಸದವಕಾಶ 1962ರಲ್ಲೊಮ್ಮೆ ನಮ್ಮ ಜನರಿಗೆ ಒದಗಿತ್ತು. ಅವರಿದ್ದಲ್ಲೇ ಸನ್ಮಾನಸಮಾರಂಭವೊಂದನ್ನು ಕೇಂದ್ರ ಲಲಿತಕಲಾ ಅಕೆಡಮಿ ಏರ್ಪಡಿಸಿತ್ತು. ಇದರ ಅಂಗವಾಗಿ. ಇತರ ವೇಳೆಯಲ್ಲಿ ವೀಕ್ಷಿಸಲು ದುರ್ಲಭವಾದ, ಅವರ ಅಪೂರ್ವ ಚಿತ್ರಕಲಾ ಕೃತಿಗಳನ್ನೂ ಶಿಲ್ಪಕೃತಿಗಳನ್ನೂ ಪ್ರದರ್ಶಿಸಿ, ಕಲಾಭಿಮಾನಿಗಳಿಗೆ ಒಂದು ರಸದೌತಣವನ್ನು ಒದಗಿಸಲಾಗಿತ್ತು. ಬೆಂಗಳೂರಿನ ಮಲ್ಲೇಶ್ವರಂ 18ನೇ ಅಡ್ಡ ರಸ್ತೆಯಲ್ಲಿ ಅವರ ಮನೆಯಲ್ಲೇ ಆಕರ್ಷಕ ಪ್ರದರ್ಶನವೂ ಸರಳ ಸಮಾರಂಭವೂ ಏರ್ಪಟ್ಟಿದ್ದುವು.

ವೆಂಕಟಪ್ಪನವರು ತಮ್ಮ ಬದುಕಿನಲ್ಲಿ ಯಾವ ರೀತಿಯ ಅಚ್ಚುಕಟ್ಟನ್ನು ಕಾಪಾಡಿಕೊಂಡು ಬಂದಿದ್ದರು ಎಂಬುದಕ್ಕೆ ಅಲ್ಲಿಯ ವಾತಾವರಣವೇ ಸಾಕ್ಷಿಯಾಗಿತ್ತು. ಅಲ್ಲಿ ಅವರ ಅಪೂರ್ವ ಕಲಾಕೃತಿಗಳನ್ನು ಪ್ರದರ್ಶಿಸಲಾಗಿತ್ತು. ಜಲವರ್ಣದ ಇಪ್ಪತ್ತೆರಡು ಪ್ರಕೃತಿ ಚಿತ್ರಗಳನ್ನೂ ನಾಲ್ಕು ವೀಣೆಗಳನ್ನೂ ಆಳೆತ್ತರದ ನಾಲ್ಕು ಪ್ಲಾಸ್ಟರ್ ಉಬ್ಬುಚಿತ್ರಗಳನ್ನು (ರಿಲೀಫ್) ಕ್ರಮವಾಗಿ ಜೋಡಿಸಲಾಗಿತ್ತು. ಇವುಗಳ ಜೊತೆಗೆ ವೆಂಕಟಪ್ಪನವರಿಗೆ ಆಪ್ತರಾಗಿದ್ದ ಕಲ್ಕತ್ತ ಕಲಾಶಾಲೆಯ ಪ್ರಿನ್ಸಿಪಾಲ್ ಹಾರ್ವೇ ಮತ್ತು ಪರ್ಸಿ ಬ್ರೌನರವರಲ್ಲದೇ ಮತ್ತೆ ಕೆಲವರ ಉಬ್ಬುಚಿತ್ರಗಳ ಛಾಯಚಿತ್ರಗಳನ್ನೂ ಅಲ್ಲಿ ಇರಿಸಲಾಗಿತ್ತು. ಇವೇ ಅಲ್ಲದೆ ದಂತದ ಫಲಕದ ಮೇಲೆ ಜಲವರ್ಣದಲ್ಲಿ ಬಿಡಿಸಿದ ಕೃಷ್ಣರಾಜ ಒಡೆಯರ ಮತ್ತು ಕಲಾಗುರು ಅಬನೀಂದ್ರನಾಥ ಠಾಕೂರರ ರೂಪ ಚಿತ್ರವನ್ನೂ ಅಲಿ ವೀಕ್ಷಿಸಬಹುದಾಗಿತ್ತು.

ಕೆ. ವೆಂಕಟಪ್ಪನವರು ಅನೇಕ ಕ್ಷೇತ್ರಗಳಲ್ಲಿ ಕೈ ಆಡಿಸಿದ್ದರು. ಪ್ರತಿಯೊಂದರಲ್ಲೂ ಅಮೋಘ ಕೃತಿಗಳನ್ನು ರಚಿಸಿದ್ದರು. ವರ್ಣಚಿತ್ರ, ಶಿಲ್ಪ, ಪ್ಲಾಸ್ಟರ್ ಉಬ್ಬುಚಿತ್ರ ಕೆಲಸ, ತಾಮ್ರದ ತಗಡಿನ ಮೇಲೆ ಉಬ್ಬುಚಿತ್ರ ಕೆಲಸ, ವೀಣೆಗಳ ರಚನೆ, ವೀಣಾವಾದನ — ಇವುಗಳಲ್ಲೆಲ್ಲ ಅವರು ಸಿದ್ಧ ಹಸ್ತರಾಗಿದ್ದರು. ಇವುಗಳಲ್ಲಿ ಯಾವ ಒಂದರಲ್ಲೇ ಆದರೂ ಅವರಷ್ಟು ಪ್ರಾವೀಣ್ಯ ಪಡೆದವರು ದೊಡ್ಡ ಕಲಾವಿದ ಎಂದು ಮೆರೆಯಬಹುದಿತ್ತು. ಆದರೆ ವೆಂಕಟಪ್ಪನವರು ಎಲೆಮರೆಯ ಹೂವಿನಂತಿದ್ದರು.

ಜಲವರ್ಣ ಚಿತ್ರರಚನೆಯಲ್ಲಿ ಇವರಷ್ಟು ಸಿದ್ಧಿ ಪಡೆದವರು ವಿರಳ. ಈ ಮಾಧ್ಯಮ ಕಷ್ಟಸಾಧ್ಯವಾದ ಕಲೆಗಾರಿಕೆ. ಒಮ್ಮೆ ವರ್ಣಗಳನ್ನು ಬಳಸಿದರೆ ಮತ್ತೆ ಮೇಲಿಂದ ಮೇಲೆ ತೈಲವರ್ಣಗಳಂತೆ ಬಳಸುವಂತಿಲ್ಲ. ಪ್ರಕೃತಿ ಚಿತ್ರಚನಾ ಸ್ವಚ್ಛತೆ ಅವರ ಪ್ರತಿಯೊಂದು ಕೃತಿಯಲ್ಲೂ ಎದ್ದು ತೋರುವ ವಿಶೇಷ ಗುಣ. ನೀಲಗಿರಿ, ಕೊಡೈಕೆನಾಲ್ ಮತ್ತು ಚಾಮುಂಡಿ ಬೆಟ್ಟಗಳ ನಿಸರ್ಗ ದೃಶ್ಯಗಳನ್ನು ಆಯಾ ಋತುಗಳಿಗೆ ತಕ್ಕಂತೆ ರಚಿಸಿದ್ದಾರೆ. ಪ್ರತಿಯೊಂದು ಕೃತಿಯಲ್ಲೂ ಅವರು ಅತಿ ಸೂಕ್ಷ್ಮರೇಖಾವಿನ್ಯಾಸ ಮತ್ತು ವರ್ಣವೈಖರಿಗಳನ್ನು ಕಾಪಾಡಿಕೊಂಡು ಬಂದಿದ್ದಾರೆ. ಬಿಳಿ ವರ್ಣವನ್ನು ಬಳಸದೆಯೇ ಕೃತಿ ರಚಿಸುವ ಚಮತ್ಕಾರ ಇವರದು. ರಾತ್ರಿಯ, ಸಂಜೆಯ ಸೊಬಗಿನ, ಬೆಳದಿಂಗಳ, ಪ್ರಕೃತಿಯ ಪ್ರತಿ ಕಾಲದ ಪ್ರಕೃತಿಯ ಪ್ರತಿರೂಪುಗಳನ್ನು ಸೃಜಿಸಿದ್ದಾರೆ. ಈ ಕೃತಿಗಳಲ್ಲಿಯ ಜಲ, ಮೋಡ, ಬಂಡೆ, ಗಿಡ, ಮರ, ಬಳ್ಳಿ, ಮಳೆ, ಮಿಂಚು, ನೆಳಲು, ಬಿಸಿಲು, ಬೆಳದಿಂಗಳು, ಸಂಜೆ, ಮುಂಜಾವು ಮುಂತಾದವನ್ನು ಬಹು ಸ್ವಾಭಾವಿಕ ವರ್ಣಗಳಲ್ಲಿ ನಿರೂಪಿಸಿದ್ದಾರೆ. ಇಲ್ಲಿಯ ಕುಂಚವೈಭವಕ್ಕೆ ಕಲಾವಿದರ ಬಹುದಿನದ ಅಪಾರ ಅನುಭವ ಸಾಧನೆಗಳೇ ಕಾರಣ ಎನ್ನಬೇಕು. ಪ್ರತಿಯೊಂದು ಚಿತ್ರವೂ ಅವರ ತಪಸ್ಸಿನ ಪ್ರಸಾದವಾಗಿ ಕಲಾಭಿಮಾನಿಗಳನ್ನು ಚಕಿತಗೊಳಿಸುತ್ತದೆ.

ಕೆ. ವೆಂಕಟಪ್ಪನವರು ಜಲವರ್ಣ ಪ್ರಕೃತಿ ಚಿತ್ರಗಳ ಜೊತೆಗೆ ದಂತದ ಫಲಕದ ಮೇಲೆ ಜಲವರ್ಣದಲ್ಲಿ ರೂಪಚಿತ್ರ ಹಾಗೂ ಕಾವ್ಯ ಚಿತ್ರಗಳನ್ನೂ ರಚಿಸಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರ ಇಂಥ ಎರಡು ದಂತಫಲಕ ಕೃತಿಗಳಲ್ಲಿಯ ಕಲೆಗಾರಿಕೆ, ಕುಂಚಕೌಶಲ ಕೌತುಕಪಡುವಂತಿದೆ. ಸೂಕ್ಷ್ಮದರ್ಶಿಯಿಂದ ನೋಡಿದರೂ ಅಲ್ಲಿಯ ವರ್ಣಗಳ, ರೇಖೆಗಳ ಜೀವಾಳ ವ್ಯಕ್ತವಾಗದಿರದು. ಈ ಕೃತಿಗಳ ಕಣ್ಣುಗಳಲ್ಲಿ ಜೀವ ತುಂಬಲು ಇವರು ಬಳಸಿರುವ ಸೂಕ್ತ ವರ್ಣಗಳು ಆಶ್ಚರ್ಯಪಡುವಂತಹವು. ದಂತದ ಫಲಕದ ಮೇಲೆ ನೀರು-ಬಣ್ಣಗಳನ್ನು ನಿಲ್ಲಿಸುವುದೇ ಸಾಹಸದ, ಶ್ರಮದ, ಜಾಣ್ಮೆಯ ಕೆಲಸ. ಅದನ್ನು ಅವರು ಸಾಧಿಸಿದ್ದರು.



ರಾಧ ಮತ್ತು ಜಿಂಕೆ

Radha and the deer

ಪ್ಲಾಸ್ಟರಿನ ಉಬ್ಬುಚಿತ್ರ ಕೆಲಸದಲ್ಲಿ ಇವರು ಚಿತ್ರಕಲೆಯಷ್ಟೇ ಅದ್ವಿತೀಯವಾದ ಪ್ರೌಢಿಮೆಯನ್ನು ತೋರಿರುವುದು ದೊಡ್ಡ ಸಾಧನೆ ಎನ್ನಬೇಕು. ಇದು ವರ್ಣರಹಿತ ಕಲೆ. ಆದರೂ ವರ್ಣಗಳ ಪ್ರಭಾವವನ್ನೇ ತರಬೇಕು. ಅವುಗಳ ರಚನೆಯಲ್ಲಿ ಉಬ್ಬುತಗ್ಗುಗಳ ಕೌಶಲ ಬಹು ಮುಖ್ಯವಾದುದು. ಅದು ಎಷ್ಟು ಸೂಕ್ಷ್ಮವಾಗಿರುತ್ತದೋ ಎಷ್ಟು ತೆಳುವಾಗಿರುತ್ತದೋ ಅಷ್ಟರಮಟ್ಟಿಗೆ ಶಿಲ್ಪಿಯ ಕಲಾತಜ್ಞತೆ ವ್ಯಕ್ತವಾಗಿರುತ್ತದೆ; ಕಲಾರಚನೆ ಅಷ್ಟರಮಟ್ಟಿಗೆ ಕಷ್ಟವಾಗುತ್ತದೆ. ಉಡುಪು ಹಾಗೂ ಚರ್ಮಗಳ ವ್ಯತ್ಯಾಸವನ್ನು ತೋರಿಸಬೇಕಾಗುತ್ತದೆ. ವೆಂಕಟಪ್ಪನವರ ನಾಲ್ಕು ದೊಡ್ಡ ಉಬ್ಬುಚಿತ್ರ ಕೃತಿಗಳು ಪ್ರೇಕ್ಷಕರ ದೃಷ್ಟಿಯನ್ನು ಸೆಳೆಯುತ್ತದೆ. ಅಂದಿನ ಪ್ರದರ್ಶನದಲ್ಲಿ ಅರಣ್ಯದ ನಡುವೆ ಗುಹೆಯೊಂದರಲ್ಲಿ ತನ್ನ ಗುರು ದ್ರೋಣಾಚಾರ್ಯರ ಪ್ರತಿಮೆಯನ್ನು ಇಟ್ಟುಕೊಂಡು ಧನುರ್ವಿದ್ಯಾಭ್ಯಾಸದಲ್ಲಿ ತೊಡಗಿರುವ ಏಕಲವ್ಯನ ಶ್ರದ್ಧಾಸಕ್ತಿಗಳು ಅನುಪಮವಾಗಿ ವ್ಯಕ್ತವಾಗುವಂತಿರುವ ಕೃತಿ ಒಂದೆಡೆ ಇದ್ದರೆ, ಅದರ ಪಕ್ಕದಲ್ಲೇ ಇದ್ದ, ಅದೇ ಮಹಾಭಾರತದಿಂದ ಆರಿಸಿಕೊಂಡ ದೃಶ್ಯದಲ್ಲಿ ಕೌರವಪಾಂಡವರಿಗೆ ದ್ರೋಣಾಚಾರ್ಯರು ಬಿಲ್ಲುವಿದ್ಯೆಯ ಶಿಕ್ಷಣ ಕೊಡುತ್ತಿರುವ ಅಸದೃಶ್ಯವಾದ ರಮ್ಯಚಿತ್ರವಿತ್ತು. ಅವುಗಳ ಪಕ್ಕದಲ್ಲೇ ಶಿವತಾಂಡವದ ಅಪೂರ್ವ ಕೃತಿ ಆಕರ್ಷಕವಾದ ಭಂಗಿಯಲ್ಲಿ ಹೃದಯವನ್ನು ಸೆಳೆಯುತ್ತಿತ್ತು. ಇವೆಲ್ಲಕ್ಕಿಂತಲೂ ಮಿಗಿಲೆನಿಸಿದ 'ಶಾಕುಂತಲೆಯ ಬೀಳ್ಕೊಡುಗೆ' ದೃಶ್ಯ ಅಸಾಧಾರಣವಾದುದು. ತನ್ನ ಪತಿಯ ರಾಜಗೃಹಕ್ಕೆ ತೆರಳುತ್ತಿರುವ ಶಕುಂತಲೆಯ ಮುಖದಲ್ಲಿ ಮೂರು ಭಾವಗಳನ್ನು ಕಲಾವಿದರು ತಂದಿದ್ದಾರೆ. ತನ್ನ ಪತಿಯನ್ನು ಸೇರುವ ಸಂತೋಷ ಒಂದು ಕಡೆಯಾದರೆ, ತನ್ನ ಅಪ್ತೇಷ್ಟರನ್ನು ಬಿಟ್ಟು ತೆರಳುವ ವೇದನೆ ಮತ್ತೊಂದು ಕಡೆ. ಹೊಸ ಜನ ಹೊಸ ಸ್ಥಳಗಳ ಅನುಭವವನ್ನು ಪಡೆಯುವ ಕುತೂಹಲಾಜನಕ ಸಂತೋಷ ಒಂದು ಕಡೆ. ಹೀಗೆಯೇ ಸಿದ್ಧಾರ್ಥನ ನಿರ್ಗಮನ ದೃಶ್ಯದಲ್ಲಿಯೂ ಶಾಂತಭಾವ ಅಪೂರ್ವವಾಗಿ ವ್ಯಕ್ತಪಟ್ಟಿದೆ. ಪ್ರತಿಮೆಗಳ ಪೈಕಿ 'ರವೀಂದ್ರ'ರ ಕೃತಿ ವಿಶಿಷ್ಟವಾದುದು. 1922ರಲ್ಲಿ ರವೀಂದ್ರರು ಮೈಸೂರಿಗೆ ಬಂದಿದ್ದರು. ಅವರ ಐದು-ಆರು ಭಂಗಿಗಳ ಭಾವಚಿತ್ರಗಳ ನೆರವಿನಿಂದ ರಚಿಸಿದ ಕೃತಿ ಇದು. ಮಹಾಕವಿಯ ಕೂದಲ ಎಳೆಯನ್ನೂ ಭಾವಪೂರ್ಣ ಮುಖಮುದ್ರೆಯನ್ನೂ ಮೂಡಿಸಿರುವುದರಲ್ಲಿ ಶಿಲ್ಪಿ ತಮ್ಮ ಪ್ರತಿಭೆಯನ್ನು ಬೆಳಗಿದ್ದಾರೆ.

ವೆಂಕಟಪ್ಪನವರು ತಮ್ಮ ಕಲಾಕೃತಿಗಳಿಗೆ ವಸ್ತುವನ್ನು ಆರಿಸಿಕೊಳ್ಳುವಲ್ಲಿ ಸಾಮಾನ್ಯರ ಬದುಕನ್ನು ನಿರ್ಲಕ್ಷಿಸಿಲ್ಲ. ಅವರ ''ಮಾಣಿ' ಈ ದೃಷ್ಟಿಯಿಂದ ಒಂದು ಅಪೂರ್ವವಾದ ಕೃತಿ. ಆ ಮುಗ್ಧ ಬಾಲಕನ ಸಹಜ ಭಾವನೆಗಳನ್ನು ಶಿಲ್ಪಿಗಳು ಅತ್ಯಂತ ಸಹಜತೆಯಿಂದ ತಂದಿದ್ದಾರೆ. ಕಿವಿಯ ಸುತ್ತುಮುರಿ, ಬೋಳುತಲೆಯ ನಡುವೆ ಬತ್ತಿದಂತಿರುವ ಪುಡಿಜುಟ್ಟು — ಹೀಗೆ ವಿಚಿತ್ರವಾಗಿ ತೋರುವ ಈ ಕೃತಿಯನ್ನು ಯಾರೂ ಮರೆಯುವಂತಿಲ್ಲ. ಅಲ್ಲಿಯೇ ನೆಲದ ಮೇಲೆ ಯಾರೋ ಅಜಾಗರೂಕತೆಯಿಂದ ತುಳಿದು ಭಿನ್ನವಾದ 'ಸಿದ್ಧಾರ್ಥ' ಅತ್ಯಂತ ಮೋಹಕವಾದ ತಾಮ್ರದ ಉಬ್ಬುಚಿತ್ರ ಕೃತಿ. ಅದನ್ನು ಅಲ್ಲಿಯೇ ಹಾಗೆಯೇ ಇರಿಸಲಾಗಿತ್ತು.

ನಾವು ಕೆಲವರು 1960ರಲ್ಲಿ ಕೆ.ವಿ.ಯವರನ್ನು (ಕೆ. ವೆಂಕಟಪ್ಪನವರನ್ನು ಹೀಗೆ ಕರೆಯುವ ವಾಡಿಕೆಯಿದೆ) ಸಂದರ್ಶಿಸಿದಾಗ ಅವರು ಹಾಸಿಗೆ ಹಿಡಿದಿದ್ದರು. ಅನಾರೋಗ್ಯದಿಂದ ಅವರ ಶಕ್ತಿ ಕುಗ್ಗಿದಂತೆ ಕಂಡರೂ ಅವರ ಮುಖದ ತೇಜಸ್ಸು ಅಚ್ಚಳಿಯದೆ ಇತ್ತು. ಕಣ್ಣುಗಳಲ್ಲಿ ಅದೇ ಹೊಳಪು, ಅದೇ ಸೂಕ್ಷ್ಮದೃಷ್ಟಿ. ಸ್ಫುಟವಾಗಿ ಸ್ವಚ್ಛವಾಗಿ ಮಾತನಾಡುತ್ತಿದ್ದರು. ಎಪ್ಪತ್ತೈದರ ಗಡಿಯಲ್ಲಿದ್ದ ಅವರಿಗೆ ತಮ್ಮ ದೀರ್ಘವಯೋಮಾನದ ಬಹುಮುಖ ಕಲಾಸಾಧನೆಯ ತರುವಾಯ ವಿಶ್ರಾಂತಿ ಅಗತ್ಯವಾಯಿತೇನೋ ಎಂದೆನಿಸುತ್ತಿತ್ತು ನಮಗೆ. ಆದರೆ ಅವರು ಕೊನೆಯವರೆಗೂ ಕುಂಚವನ್ನು ಕೆಳಗಿಟ್ಟವರಲ್ಲ. ಅನೇಕ ವರ್ಷ ಅವರ ಸಹಪಾಠಿಯಾಗಿದ್ದ ವೀಣೆಯೂ ಆಗ ಮೌನ ತಾಳಿತ್ತು. ಮತ್ತೊಂದು ಕೊಠಡಿಯಲ್ಲಿ ಬಿದ್ದಂತೆ ಕಾಣುತ್ತಿದ್ದುವು. ಕಲಾಗಾರದಲ್ಲಿ ಆಳೆತ್ತರದ 'ಪ್ಲಾಸ್ಟರ್ ಆಫ್ ಪ್ಯಾರಿಸ್'ನ ನಾಲ್ಕು ದೊಡ್ಡ ಉಬ್ಬುಚಿತ್ರಗಳ ಮೇಲೆ ತೆಳುವಾದ ಬಾದಾಮಿ ಕಾಗದ ಹೊದಿಸಿದ್ದಿತು. ಮತ್ತೊಂದು ಕೋಣೆಯಲ್ಲಿ ಅವರ ಅಪೂರ್ವ ಶಿಲ್ಪಕೃತಿಗಳನ್ನು ವೃತ್ತಾಕಾರದ ಸಿದ್ಧಾರ್ಥ, ರವೀಂದ್ರರು, ಮಾಣಿ — ತೆಳುವಾದ ಶುಭ್ರವಸ್ತ್ರದಲ್ಲಿ ಮುಚ್ಚಿದ್ದರು. ಕೆ.ವಿ.ಯವರ ಅಂದಿನ ಸಹಪಾಠಿಗಳೆಂದರೆ ಇವೇ. ವಿಶಾಲವಾದ ಸೌಧದಲ್ಲಿ ತಮ್ಮ ಕಲಾಕೃತಿಗಳ ನಡುವೆ ಏಕಾಂಗಿಯಾಗಿ ಇದ್ದ ಈ ಕಲಾತಪಸ್ವಿ ಜನಜಂಗುಳಿಯನ್ನು ಬಯಸಿದವರಲ್ಲ. ಕಲಾರಾಧನೆಯನ್ನೇ ತಮ್ಮ ಜೀವನದ ಉಸಿರಾಗಿ, ತಮ್ಮ ಬಾಳಿನ ಸರ್ವಸ್ವವಾಗಿ ಉಳಿಸಿಕೊಂಡು ಬಂದಿದ್ದರು.

ಅವರಾಗ ಕಲೆಯ ಬಗ್ಗೆ ಮಾತನಾಡುತ್ತಾ 'ಕಲೆಯಲ್ಲಿ ನಮ್ಮ ಜನಕ್ಕೆ ಅಭಿರುಚಿ 'ಕಡಿಮೆ' ಎಂದು ನುಡಿದು ದೃಷ್ಟಿಯನ್ನು ಒಂದು ಕಡೆ ಹೊರಳಿಸಿದರು. ಆ ಮಾತಿನ ಹಿಂದೆ ಅವರ ಬದುಕಿನಲ್ಲಿ ಕಂಡ ಸತ್ಯ ಅಡಗಿದಂತಿತ್ತು. ಈ ಕಲಾವಿದನ ಹಿರಿಮೆಯನ್ನು ಅರಿತೂ ನಮ್ಮ ಜನತೆ, ನಮ್ಮ ಸರ್ಕಾರ ಅವರನ್ನು ಔದಾಸೀನ್ಯದಿಂದ ಕಂಡವು. ನಾಡಿಗೆ ಅವರಿಂದ ಹೆಚ್ಚು ಕಲಾಸೇವೆಯ ಅವಕಾಶವಿಲ್ಲದಂತಾಯಿತು. ಆದರೂ ಕೆ.ವಿ.ಯವರು ಉಳಿಗಿರುವ ಅಲ್ಪಸ್ವಲ್ಪ ಕೃತಿಗಳೇ ನಮ್ಮ ನಾಡಿನ ಅಮೂಲ್ಯ ಆಸ್ತಿಗಳಾಗಿವೆ.

ವೆಂಕಟಪ್ಪನವರಿಗೆ ಕಲೆಯಲ್ಲಿ ಆಸಕ್ತಿ ವಂಶಪಾರಂಪರ್ಯವಾಗಿ ಬಂದ ಆಸ್ತಿ. ಅವರ ತಾತ ಪ್ರಸಿದ್ಧ ಚಿತ್ರಕಾರರಾಗಿದ್ದ ಚಿತ್ರದುರ್ಗದ ವೆಂಕಟಪ್ಪ. ಕೆ.ವಿ.ಯವರ ತಂದೆಯ ಹೆಸರು ಕೃಷ್ಣಪ್ಪ. ಕೆ. ವೆಂಕಟಪ್ಪನವರ ವಂಶದವರು ರಾಜರ ಕಾಲದಲ್ಲಿ ದುರ್ಗದಿಂದ ಮೈಸೂರಿಗೆ ಬಂದು ಸೇರಿ ರಾಜಾಶ್ರಯ ಪಡೆದವರು. ವೆಂಕಟಪ್ಪನವರು ಚಾಮರಾಜೇಂದ್ರ ಕಲಾಶಾಲೆಯಲ್ಲಿ ರಾಮಕೃಷ್ಣನ್ ಅವರ ನೇತೃತ್ವದಲ್ಲಿ ಕಲಾಭ್ಯಾಸ ನಡೆಸಿ ತಮ್ಮ ಮುಂದಿನ ಕಲಾಸಾಧನೆಗೆ ಉತ್ತಮ ಬುನಾದಿಯನ್ನು ಹಾಕಿಕೊಂಡರು. ಹೊಸ ಅರಮನೆಯನ್ನು ಕಟ್ಟುವ ಕಾಲದಲ್ಲಿ ನೂರಾರು ಜನ ಕಲಾವಿದರು ಅಲ್ಲಿ ಕೆಲಸ ಮಾಡಬೇಕಾದ ಸಂದರ್ಭ ಬಂದಾಗ ವೆಂಕಟಪ್ಪನವರಿಗೂ ಅಲ್ಲಿ ಅವಕಾಶ ಸಿಕ್ಕಿತ್ತು. ಆಗಲೇ ನುರಿತ ಕಲಾವಿದರಂತೆ ಕೈಚಳಕ ತೋರುತ್ತಿದ್ದ ಈ ಬಾಲಕನೂ ತಮ್ಮಷ್ಟೇ ಶುಲ್ಕ ಪಡೆಯುತ್ತಿದ್ದುದನ್ನು ಕಂಡ ಕೆಲ ಹಿರಿಯ ಕಲಾವಿದರು ಗೊಣಗಾಡಿ 'ಮೀಸೆ ಹೊತ್ತ ತಮಗೂ ಇನ್ನೂ ಮೀಸೆ ಚಿಗುರದ ಈ ಬಾಲಕನಿಗೂ ಸಮಾನ ಪುರಸ್ಕಾರವೇ ಎಂದು ಅಂದುಕೊಂಡರಂತೆ. 'ಕೆಲಸಮಾಡುವುದು ಮೀಸೆಯಲ್ಲ, ಹಸ್ತ' ಎಂದು ಕೆ.ವಿ.ಯವರು ಚಾತುರ್ಯದಿಂದ ಉತ್ತರಿಸಿ ಅವರನ್ನೆಲ್ಲ ನಗಿಸಿದ್ದರಂತೆ.

ಒಮ್ಮೆ ಇವರ 'ಸಿಂಹ ಸಿಂಹಿಣಿ' ಎಂಬ ಚಿತ್ರವನ್ನು ಅರಮನೆಯ ಅಧಿಕಾರಿಗಳೊಬ್ಬರು ನೋಡಿ ಮಹಾರಾಜರ ದೃಷ್ಟಿಗೆ ತಂದಾಗ ಅವರು ಆ ಚಿತ್ರವನ್ನು ಆ ಹುಡುಗ ಬರೆದ ಕೃತಿಯೆಂದು ನಂಬಲಾಗಲಿಲ್ಲವಂತೆ. ಕೊನೆಗೆ ಮಹಾರಾಜರೇ ಅವರನ್ನು ಕರೆಸಿ ಒಂದು ಸಣ್ಣ ಪರೀಕ್ಷೆ ನಡೆಸಿ, ಅವರ ಪ್ರತಿಭೆಯನ್ನು ಖಚಿತಮಾಡಿಕೊಂಡರು. ಅವರ ಕಲಾಕೌಶಲವನ್ನು ಮೆಚ್ಚಿ ನೂರು ರೂಪಾಯಿಗಳ ಬಹುಮಾನ ನೀಡಿ ಪ್ರೋತ್ಸಾಹಿಸಿದರು. ಹೀಗೆ ರಾಜದೃಷ್ಟಿಗೆ ಬಿದ್ದ ಅವರಿಗೆ ಮುಂದೆ ತಮ್ಮ ಹೆಚ್ಚಿನ ಕಲಾಭ್ಯಾಸಕ್ಕೆ ಅವಕಾಶಗಳು ಒದಗಿಬಂದುವು. ನಾಲ್ವಡಿ ಕೃಷ್ಣರಾಜ ಒಡೆಯರು ಇವರ ಜಾಣ್ಮೆಯನ್ನು ತಕ್ಷಣವೇ ಗುರುತಿಸಿ ಹೆಚ್ಚಿನ ಕಲಾಶಿಕ್ಷಣಕ್ಕೆ ಇವರನ್ನು ಕಲ್ಕತ್ತಕ್ಕೆ ಕಳಿಸಲು ಅನುಕೂಲ ಮಾಡಿಕೊಟ್ಟರು. ಇವರಿಗೆ ಇಂಗ್ಲಿಷ್ ಶಿಕ್ಷಣ ಕೊಡಿಸಿದರು. ಈ ಮೊದಲೇ ಪಾಶ್ಚಾತ್ಯ ಕಲಾ ಸಂಪ್ರದಾಯವನ್ನು ಕೈಗೂಡಿಸಿಕೊಂಡು ಮದ್ರಾಸ್ ಚಿತ್ರಕಲಾ ಪರೀಕ್ಷೆಗಳಲ್ಲಿ ಡಿಪ್ಲೊಮಾ ಗಳಿಸಿದ್ದ ವೆಂಕಟಪ್ಪನವರು ಕೃಷ್ಣರಾಜ ಒಡೆಯರ ಪ್ರೋತ್ಸಾಹದಿಂದ 1908ರಲ್ಲಿ ಸರ್ಕಾರದ ವಿದ್ಯಾರ್ಥಿವೇತನ ಪಡೆದು ಕಲ್ಕತ್ತ ಕಲಾಶಾಲೆಯಲ್ಲಿ ಉನ್ನತ ಶಿಕ್ಷಣಕ್ಕೋಸ್ಕರ ಹೋದರು. ಅಲ್ಲಿ ಪರ್ಸಿ ಬ್ರೌನ್ ಹಾಗೂ ಡಾ. ಅವನೀಂದ್ರನಾಥ್ ಠಾಕೂರ್ ಅವರ ಮಾರ್ಗದರ್ಶನಲ್ಲಿ ಕೆ.ವಿ.ಯವರ ಕಲಾಭ್ಯಾಸ ಮುಂದುವರಿಯಿತು. ಎರಡು ವರ್ಷಗಳಲ್ಲಿ ಹಿಂದಿರುಗಬೇಕಾಗಿದ್ದ ಅವರು ಆರೇಳು ವರ್ಷಗಳ ಕಾಲ ಅಲ್ಲಿಯೇ ನಿಂತು ಬೌದ್ಧ, ರಜಪೂತ ಮತ್ತು ಮೊಗಲ್ ಸಂಪ್ರದಾಯಗಳನ್ನು ಅಭ್ಯಾಸ ಮಾಡಿಕೊಂಡರು. ದೇಶದ ನಾನಾ ಚಿತ್ರಸಂಗ್ರಹಾಲಯಗಳನ್ನು ಸಂದರ್ಶಿಸಿದರು. 1910ರಲ್ಲಿ ಲಂಡನ್ನಿಂದ ಮಿಸೆಸ್ ಹೆರಿಂಗ್‌ಹ್ಯಾಮ್ ತಮ್ಮ 80ನೇಯ ವಯಸ್ಸಿನಲ್ಲಿ ಅಜಂತ ಗುಹಾಲಯಗಳ ಪ್ರಾಚೀನ ಭಿತ್ತಿಚಿತ್ರ ಕಲಾಭ್ಯಾಸವನ್ನು ನಡೆಸಲು ಭಾರತಕ್ಕೆ ಬಂದಿದ್ದರು. ಆ ಸಂದರ್ಭದಲ್ಲಿ ಅವರ ಜೊತೆಯಲ್ಲಿ ಅಧ್ಯಯನಕ್ಕೆ ಪರ್ಸಿ ಬ್ರೌನರು ತಮ್ಮ ನೆಚ್ಚಿನ ಶಿಷ್ಯರಲ್ಲಿ ಇಬ್ಬರಾದ ನಂದಲಾಲ್ ಬಸು ಮತ್ತು ವೆಂಕಟಪ್ಪನವರನ್ನು ಕಳಿಸಿದರು. ಹೆಚ್ಚಿನ ಶಿಲ್ಪಕಲಾ ಪರಿಚಯಕ್ಕಾಗಿ ಇಟಲಿಗೆ ತೆರಳುವ ಅವಕಾಶ ವೆಂಕಟಪ್ಪನವರಿಗೆ ಒಂದನೆಯ ಮಹಾಯುದ್ಧದಿಂದಾಗಿ ತಪ್ಪಿಹೋಯಿತು. ಅನಂತರ 1916ರಲ್ಲಿ ಮೈಸೂರಿಗೆ ಹಿಂದಿರುಗಿದ ಮೇಲೆ ಸಂಗೀತದ ವ್ಯಾಮೋಹ ಹೆಚ್ಚಾಗಿ ಕೃಷ್ಣರಾಜ ಒಡೆಯರ ಅಭಿಮತದಂತೆ ವೈಣಿಕಶಿಖಾಮಣಿ ವೀಣೆ ಶೇಷಣ್ಣನವರಲ್ಲಿ ಏಳು ವರ್ಷಗಳ ಕಾಲ ವೀಣಾಭ್ಯಾಸ ಮಾಡಿದರು. ಇದೇ ಸಂದರ್ಭದಲ್ಲಿ ಅವರ ಶ್ರೇಷ್ಠ ಕೃತಿ 'ವೀಣಾ ಹುಚ್ಚು' ಜಲವರ್ಣದಲ್ಲಿ ಸೊಗಸಾಗಿ ರಚಿತವಾಯಿತು. ಈ ಕೃತಿ ವಿಶ್ವದ ಪ್ರಮುಖ ಸಂಚಿಕೆಗಳಲ್ಲಿ ಪ್ರಕಟವಾಗಿ ಕೆ.ವಿ.ಯವರಿಗೆ ಅಪಾರ ಯಶಸ್ಸು ತಂದುಕೊಟ್ಟಿತು. ಅವನಿಂದ್ರನಾಥರು ಬಿಟ್ಟು ಕೊಟ್ಟ ಕಲ್ಕತ್ತ ಕಲಾ ಶಾಲೆಯ ಮುಖ್ಯ ಪ್ರಾಧ್ಯಾಪಕ ಸ್ಥಾನಕ್ಕೆ ಕರೆ ಬಂದದ್ದು ಇದೇ ಕಾಲದಲ್ಲಿ. ಆದರೆ ವೆಂಕಟಪ್ಪನವರು ಅದಕ್ಕೆ ಮನಗೊಡಲಿಲ್ಲ.



ಇ.ಬಿ. ಹಾವೆಲ್, ಒಂದು ಮೂರ್ತಿ ಶಿಲ್ಪ

E. B. Havel, a bust

ಮೈಸೂರು ನಗರದಲ್ಲಿ 1923ರಲ್ಲಿ ಕೆ.ವಿ. ಯವರು ನಡೆಸಿದ ಜೀವನ ಅಪೂರ್ವವಾದುದು. ತಪಸ್ಸದೃಶವಾದುದ್ದು . ಕೃಷ್ಣರಾಜ ಒಡೆಯರ ಅಪೇಕ್ಷೆಯಂತೆ ಅವರು ಅರಮನೆಯಲ್ಲಿ ಶಿಲ್ಪಕೃತಿಗಳ ರಚನೆಗೆ ತೊಡಗಿದರು. ಅರಸರು ಈ ಕಲಾವಿದರಿಗೆ ನೀಡಿದ ಪ್ರೋತ್ಸಾಹ ಚಿರ ಸ್ಮರಣೀಯವಾದುದ್ದು'. ಆಗ ರಚಿಸಿದ ಕೆಲವು ಉಬ್ಬುಚಿತ್ರಗಳು ಈಗಲೂ ಮೈಸೂರು ಅರಮನೆಯ ಗಾಜಿನ ಮಹಡಿಯ ದರ್ಬಾರು ಭವನದ ಭಿತ್ತಿಯ ಮೇಲಿವೆ. ಇದೇ ಸಂದರ್ಭದಲ್ಲಿ ದೆಹಲಿಯ ವೈಸ್‌ರಾಯ್ ಭವನದ ಶೃಂಗಾರಕ್ಕೆ ಕರೆ ಬಂದರೂ ವೆಂಕಟಪ್ಪನವರು ಅದನ್ನು ಒಪ್ಪಿಕೊಳ್ಳದೆ ಕನ್ನಡ ನಾಡಿನಲ್ಲೇ ನಿಂತದ್ದು ಅವರ ನಾಡ ಪ್ರೇಮವನ್ನು ತೋರಿಸುತ್ತದೆ. ಮಹಾರಾಜರು ಕೆ.ವಿ.ಯವರಲ್ಲಿ ಆತ್ಮೀಯತೆಯಿಂದ ವರ್ತಿಸುತ್ತಿದ್ದರು. ಅವರು ಯಾವ ಕಟ್ಟುಪಾಡೂ ಇಲ್ಲದೆ ಸಾಧಾರಣ ಉಡುಪಿನಲ್ಲೇ ಮಹಾರಾಜರನ್ನು ಸಂದರ್ಶನಮಾಡುವ ಅವಕಾಶವಿತ್ತಿದ್ದರು. ವೆಂಕಟಪ್ಪನವರು ಸ್ವಲ್ಪ ಕಾಲ ಚಾಮುಂಡಿ ಬೆಟ್ಟದ ಮೇಲೆ ಬಾಡಿಗೆ ಮನೆಯಲ್ಲಿದ್ದು ಅನೇಕ ನಿಸರ್ಗ ದೃಶ್ಯಗಳ ಚಿತ್ರಗಳನ್ನು ರಚಿಸಿದರು. ನೀಲಗಿರಿಯಲ್ಲಿ ಕೆಲವು ಕಾಲ ನೆಲಸಿ ಅಲ್ಲಿಯ ನಿಸರ್ಗ ದೃಶ್ಯಗಳನ್ನು ಬೇರೆ ಬೇರೆ ಋತುಗಳಲ್ಲಿ ಕಣುತ್ತಿದ್ದ ಹಾಗೆ-ಚಿತ್ರಿಸಿದರು. ಅವು ಇಂದೂ ಅನೇಕ ಕಲಾವಿದರಿಗೆ ಸ್ಫೂರ್ತಿ ನೀಡುತ್ತಿವೆ. ಮೈಸೂರಿನ ಜಗನ್ಮೋಹನ ಕಲಾ ಶಾಲೆಯಲ್ಲಿ ಇವರ 'ವೀಣಾ ಹುಚ್ಚು ', 'ರಾಧಾ ಹರಿಣಿ', 'ಅರ್ಧನಾರೀಶ್ವರ', 'ಶಿವರಾತ್ರಿ ' ಮತ್ತು 'ನೀಲಗಿರಿಯ ಪ್ರಕೃತಿ ಚಿತ್ರಗಳು, ಇಂದಿಗೂ ಕಲಾಭಿಮಾನಿಗಳನ್ನು ಆಕರ್ಷಿಸುತ್ತಿವೆ. ಇವರ ಇನ್ನೂ ಅನೇಕ ಕಲಾಕೃತಿಗಳು ಅಲ್ಲಲ್ಲಿ ಹಿತೈಷಿಗಳ ಮನೆಗಳಲ್ಲಿ ಹಂಚಿಹೋಗಿವೆ.

ಕೆ.ವಿ.ಯವರು ಹುಟ್ಟುಕಲಾವಿದರು. ಕಲಾವಿದರಿಗೆ ಸಹಜವಾದ ಏಕಾಂತ ಪ್ರಿಯತೆ ಅವರಲ್ಲಿ ಮನೆಮಾಡಿಕೊಂಡಿತ್ತು . ಸಂಜೆಯ ವೇಳೆ ಗಾಳಿ ಸಂಚಾರ ಹೊರಟಾಗ ನಡುವೆ ಕಲೆಗೆ ಸಂಬಂಧಪಟ್ಟ ಯಾವುದಾದರೂ ಭಾವ ಹೊಳೆದ ಕೂಡಲೇ ಮೋತಿಖಾನೆ ಮಹಡಿಯಲ್ಲಿದ್ದ ತಮ್ಮ ಚಿತ್ರಾಗಾರಕ್ಕೆ ಧಾವಿಸಿ ಬರುತ್ತಿದ್ದರಂತೆ. ಎಷ್ಟೋವೇಳೆ ರಾತ್ರಿಯ ನಿದ್ರೆಯ ಸಮಯದಲ್ಲಿಯೂ ಎದ್ದು ಕುಳಿತು ಕಲಾ ರಚನೆಯಲ್ಲಿ ತೊಡಗುತ್ತಿದ್ದರಂತೆ. ಕಲಾರಚನೆಯ ಕಾಲದಲ್ಲಿ ಬೇಕಾದ ಏಕಾಂತಕ್ಕೋಸ್ಕರ ಇವರು ಏನೇನೋ ಉಪಾಯಗಳನ್ನು ಹುಡುಕಬೇಕಾಯಿತು. ''The studio is closed for public until further notice, Please do not disturb,'' ಎಂದು ಮುಂಬಾಗಿಲಿನ ಮೇಲೆ ಬೋರ್ಡು ಹಾಕಿ, ಹೊರಗೆ ಬೀಗ ಹಾಕಿಸಿ, ಹಿಂಬಾಗಿಲಿನಿಂದ ಒಳಗೆ ಸೇರಿ ಕಾರ್ಯಮಗ್ನರಾಗುತ್ತಿದ್ದರು. ಅನಗತ್ಯವಾಗಿ ಒಂದು ಕ್ಷಣವನ್ನೂ ವ್ಯರ್ಥವಾಗಿ ಕಳೆಯುತ್ತಿರಲಿಲ್ಲ . ಅಪ್ಪಟ ಶುದ್ಧ ಹೃದಯ, ನಿಷ್ಕಪಟ ಸ್ವಭಾವ, ವ್ಯಕ್ತಿತ್ವದಲ್ಲಿ ಸಾಧಿಸಿಕೊಂಡಿದ್ದ ಹಿರಿಮೆ — ಇವು ಕಲೆಯಲ್ಲಿ ಮೂಡಿ ಬಂದಿದ್ದುವು. ಕಲಾಯೋಧ, ಕಲಾತಪಸ್ವಿ ಎಂಬೆಲ್ಲ ಮಾತುಗಳ ಸಾರ್ಥಕ್ಯ ಇವರಂಥ ಹಿರಿಯ ಆದರ್ಶಜೀವಿಗಳಿಂದಲೇ ಒಪ್ಪಬೇಕು. ಹಿರಿಮೆಗೆ ಒಪ್ಪುವಂಥ ನಿಯಮ ಅವರದು. ಕೊನೆಗಳಿಗೆಯ ತನಕ ತಮ್ಮನ್ನು 'ಕಲಾ ವಿದ್ಯಾರ್ಥಿ' ಎಂದೇ ಕರೆದುಕೊಳ್ಳುತ್ತಿದ್ದರು. ಸಾಗರೋಪಮವಾದ ಲಲಿತಕಲೆಯಲ್ಲಿ ನನ್ನ ಜ್ಞಾನವೆಂಬುದು ಒಂದು ಹನಿ-ಎಂದು ಅವರು ಅನೇಕ ಸಾರಿ ಹೇಳುತ್ತಿದ್ದುದುಂಟು. ನಾಲ್ವಡಿ ಕೃಷ್ಣರಾಜ ಒಡೆಯರು ದಿವಂಗತರಾದಮೇಲೆ ಅರಮನೆಯಲ್ಲಿ ಕಲೆಗೆ ಸರಿಯಾದ ಪ್ರೋತ್ಸಾಹವಿಲ್ಲದೆ ಕೆ.ವಿ.ಯವರು ಬೆಂಗಳೂರಿಗೆ ಹೋಗಿ ನೆಲಸಬೇಕಾಯಿತು.

ಚಿತ್ರ , ಶಿಲ್ಪ ಮತ್ತು ಸಂಗೀತ ಕಲೆಗಳಲ್ಲಿ ತಳೆದಿದ್ದಷ್ಟೇ ಅಭಿರುಚಿಯನ್ನು ನಾಟಕ ಕಲೆಯಲ್ಲಿ ಪಡೆದಿದ್ದ ಕೆ.ವಿ.ಯವರು ವರದಾಚಾರ್ಯರ ಅಪೂರ್ವ ಅಭಿನಯ ಕಲೆಗೆ ಮಾರುಹೋಗಿದ್ದರು. ವರದಾಚಾರ್ಯರಿಗೆ ನೇರವಾಗಿ ಹಣ ಕೈಸೇರಲೆಂದು ಅವರೇ ಮೈಸೂರಿನಲ್ಲಿ ಬೂತಿನಲ್ಲಿ ಕೂತು ಟಿಕೆಟುಗಳನ್ನು ಮಾರಿದ ಪ್ರಸಂಗಗಳೂ ಉಂಟು.

ವೆಂಕಟಪ್ಪನವರ ಆತ್ಮಾಭಿಮಾನ ಬಹು ದೊಡ್ಡದು. ಕಲೆಗೆ, ಕಲಾವಿದರಿಗೆ ಅಪಚಾರವಾದರೆ ಧೈರ್ಯವಾಗಿ ಪ್ರತಿಭಟಿಸುವ ಕೆಚ್ಚಿನ ವ್ಯಕ್ತಿಯಾಗಿದ್ದ ಇವರು ಒಮ್ಮೆ ಕಲ್ಕತ್ತದ ರಾಮಕೃಷ್ಣ ಆಶ್ರಮದ ಕಾರ್ಯಾಲಯದವರು ತಮ್ಮ ಪತ್ರಿಕೆಯಲ್ಲಿ ಇವರ ಕಲಾಕೃತಿಯ ಭಾವಚಿತ್ರವೊಂದನ್ನು ಹಿಂದುಮುಂದಾಗಿ ಮುದ್ರಿಸಿದ್ದುದರಿಂದ ಅಲ್ಲಿಯ ಉಚ್ಚನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಿ ಜಯ ಗಳಿಸಿದರು. ತಮ್ಮ ಪ್ರತಿವಾದಿಗೆ ಒಂದು ಗೌರವಪ್ರತಿಷ್ಠೆಗಳನ್ನು ತಂದುಕೊಟ್ಟಂತಾಯಿತೆಂದು ಇವರ ಐರೋಪ್ಯ ವಕೀಲರು ಪ್ರಶಂಸೆಯ ಮಾತುಗಲನ್ನಾಡಿದ್ದರು. ತಮ್ಮ ಹಕ್ಕುಬಾಧ್ಯತೆಗಾಗಿ ಯಾರನ್ನಾದರೂ ಪ್ರತಿಭಟಿಸುವ ಧೈರ್ಯ ಅವರಿಗಿತ್ತು .

ವೆಂಕಟಪ್ಪನವರನ್ನು ಅವರ ಕೊನೆಗಾಲದಲ್ಲಿ ಸೋದರಳಿಯ ಬಿ। ರಾಮರಾಜು ಸೇವೆ ಸಲ್ಲಿಸಿದ್ದರು. ವೆಂಕಟಪ್ಪನವರು ದಿವಂತಗರಾದ ಮೇಲೆ ರಾಮರಾಜು ಅವರು ವೆಂಕಟಪ್ಪನವರ ಸಮಸ್ತ ಕಲಾಕೃತಿಗಳನ್ನೂ, ಅವರು ಬಳಸುತ್ತಿದ್ದ ವಸ್ತುಗಳನ್ನೂ ಮೈಸೂರು ಸರ್ಕಾರ ಬೆಂಗಳೂರಿನಲ್ಲಿ ವೆಂಕಟಪ್ಪನವರ ಹೆಸರಿನಲ್ಲಿ ರೂಪಿಸಿದ ಕಲಾಸಂಗ್ರಹಾಲಯಕ್ಕೂ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಸಾಂಸ್ಕೃತಿಕ ವಸ್ತುಸಂಗ್ರಹಾಲಯಕ್ಕೂ ನೀಡಿದರು. ಕೇಂದ್ರ ಲಲಿತಕಲಾ ಅಕೆಡಮಿಯವರು ವೆಂಕಟಪ್ಪನವರ ಅಪೂರ್ವ ಸುಂದರ ಕೃತಿಗಳೊಡನೆ ಪರಿಚಯಾತ್ಮಕ ಕೈ ಹೊತ್ತಿಗೆಯೊಂದನ್ನು ಪ್ರಕಟಿಸಿದ್ದಾರೆ.

ಭಾರತೀಯ ಕಲಾವಿದರ ಶ್ರೇಣಿಯಲ್ಲಿ ವೆಂಕಟಪ್ಪನವರ ಸಾಧನೆ ಅಗ್ರಗಣ್ಯ. ಭಾರತೀಯ ಕಲಾಪರಂಪರೆಗೆ ಅವರು ಅರ್ಪಿಸಿದ ಕೃತಿಗಳೂ ಅನರ್ಘ್ಯ. ವೆಂಕಟಪ್ಪನವರ ಪರಿಶುದ್ಧ, ನಿಷ್ಕಪಟ ಜೀವನ ಇತರ ಕಲಾವಿದರಿಗೆ ಆದರ್ಶ. ಕರ್ಣಾಟಕದ ಕಲೆಗೆ, ಕಲಾವಿದರಿಗೆ ಒಂದು ಘನತೆಯನ್ನು, ಒಂದು ಗೌರವವನ್ನು ಅವರು ತಂದುಕೊಟ್ಟರು. ಕೆ.ವಿ.ಯವರ ಖ್ಯಾತಿ ಭಾರತ ವ್ಯಾಪಿಯದಲ್ಲ; ಅದು ವಿಶ್ವವ್ಯಾಪಿ.

ಇವರು ಕನ್ನಡಿಗರು — ಎಂಬುದು ನಾಡಿಗೇ ಹೆಮ್ಮೆಯ ಸಂಗತಿ.

# A Homage to K. Venkatappa

Tribute to the artist on the occasion of his birth centenary 1987

Editor: **S. N. CHANDRASEKHAR**



KARNATAKA LALITAKALA ACADEMY
BANGALORE

# ARTIST WITH STRONG CHARACTER

**G. Venkatachalam**

What's wrong with Mr. Venkatappa ? Why is he so forbidding and unfriendly ? Is it a pose or sheer cussedness ?" These and similar uncomfortable questions are often hurled at me when I have taken friends to meet Venkatappa. They admire his art but do not understand the man. It is not surprising either. He gives that impression at the first meeting.

I have known Venkatappa for over two decades now, and I must confess that I too do not understand him. I have walked with him,talked with him and have seen almost all his best works in his company, and yet he has been a puzzle to me. I have always imagined him as a good soul lost in a naughty world.

But of one thing I am certain: he has no pride or vanity, no poses or affectations. He is one of the simplest of men when one comes to know him well. He is not a jovial type, it is true; he doesn't take to people at once, it is well known; but he is not unsociable. He is a bit of cynic, I admit; but he is a good man with a strong character.

His seeming sullenness is a mask behind which hides a kindly soul ; and if, at times, he is a bit gruff, it is because he does not suffer fools gladly. He is one of the frankest of men and does not tolerate humbugs. A man of character, honesty and truthfullness, he gives out what is in his mind, without fear or favour, and that causes no little irritation in others who are used to conventional ways of living and lying.

Venkatappa's sturdy independence is well known to all who know him. He is one of the few artists that I know who has not bartered his soul or self-respect for any earthly possessions or honours. He dictates his own terms to the so-called art patrons, demands his own price, has his own way, and asserts, without compromise, his status as an artist before princes and paupers. He never courts patronage and refuses to be patronised by anybody, and when he does consent to execute any special work it is on his own terms and at his own sweet will and pleasure.

This he does with no superior notions about himself or conceit of his art or any insolent spirit. He is very humble and modest in his life but he does value his art and will not let it suffer at anybody's hands, friends or foes. I can recall many stories of this unbending independence of his character and how it had led him into many difficult and delicate situations. Let me give a couple of instances here.

His Highness the late Krishnarajendra Wadiyar of Mysore had always a great affection for Venkatappa and admiration for his art. He was only the patron that Venkatappa recognised in his life, and next to his guru, Abanindranath Tagore, he had the greatest respect for this royal patron,



ಮುಂಗಾರಿನ ಸೌಭಾಗ್ಯ

Bright Monsoon

When His Highness wanted to decorate the small durbar hall in the Amba Vilas with a few panels in relief, he sent for him and asked him if he would undertake the work.

He was willing, of course, but only under certain conditions. He demanded that the choice of the subjects for the panels should be left to him ; that there should be no time limit; that he must be permitted to visit the palace in his own daily garb of a short coat, a turban and dhotie and an umbrella tucked under hisı arm ; that there should be not official interference of any sort from the palace and so forth. - Knowing him as he did, His Highness granted all those conditions and watched him patiently finish three of the panels but alas ! he passed away before Venkatappa could complete the full set of five.

## BAS RELIEFS

These bas-reliefs are masterpieces of their kind and Venkatappa's best sculptural works. He devoted his best to them and created three wonderful reliefs to fill in the niches on the left side of the Amba Vilas. I have studied these reliefs, in the company of the artist, in different lights, including candle light, and as he showed me the subtle shades and delicate lines of his plastic art. I wondered if there is in all India one artist of his type, with that self-abnegation, deep devotion, fine feeling and serious purpose. He lives for his art. "The Buddha as a Beggar" and "Rama giving the ring to Hanuman" are really remarkable works of modern art, and it is a pity that they are lost inside a palace and amidst garish and gaily coloured surroundings. They certainly deserve a better and a more popular place, and should be considered national treasures.

The Maharani of Cooch Behar is a well-known patron of art, and used to be a frequent visitor of Mysore during her regency days. She met Venkatappa in Bangalore at an exhibition where she saw and admired some of his miniature portraits in ivory and wished to have her late husband's done by him. Venkatappa executed two beautiful miniatures, one in his Indian dress and the other in his European dress, which pleased her immensely. "I spent quite a fortune in Europe for a good portrait of His Highness but never could get one," she said, as she examined these two miniatures, her face a study in sheer joy and delight.

She praised Venkatappa for producing such a life-like portrait from photographs only........but would he slightly improve the face ? He did. And a little more ? "Your Highness," Venkatappa was impatient, "if you wish me to change the drunkard nose I have no objection, but it wouldn't be a true picture." "But that's exactly what I want you to do," was her request.

But there was a sequel to this. For some unknown reason, unfortunately, she revealed a bargaining spirit and not a princely attitude in her payment, which he, righteously, rejected several times, and refused to part with the portrait in European dress in spite of repeated requests by letter and in person and the pressure and influence of the late Yuvaraja of Mysore.

Among Venkatappa's miniature portraits mention must be made of his earliest portraits of Abanindranath Tagore, and those of the late S. V. Ramaswamy Mudaliar and His Highness the late Maharaja of Mysore, three little gems.

## ASCETIC

The most ascetic of Indian painters, simple, austere, unostentatious, Self-disciplined, frank and fearless, Venkatappa is an artist of the type Sukracharya describes in his Sukra Niti. He is really an ancient man of the ashrama days who, born amidst uncongenial sorroundings, finds himself at war with himself and his environment. Not that he goes about picking quarrels with everybody he meets or grumbling about his life and fate, (for he has enough stoic philosophy in him to reconcile himself to his lot and to his fellowmen), but that there is a sense of dissatisfaction due to the unnatural element in which he finds himself.

This accounts for the difficulty in dealing with him as a man; he is exacting in all the details of his life ; truthful, honest and sincere, he expects these qualities everywhere, only to meet with disappointment in most cases. As a friend, he is a problem, but as an artist he is to be honoured.

Of medium height, well-built, broad-shouldered, oval-faced with small lustrous eyes, head clean shaven (except for a wee bit of tuft left at the top) and with short sensitive fingers, Venkatappa looks what he is - a man of renunciation, an ascetic.

Venkatappa was one of the favourite pupils of Abanindranath Tagore; "Appa" as he is still called by the Tagore family. Before he went to Calcutta to join A. N. Tagore he was a student of the Madras School of Arts where he showed exeptional talent and merit, which resulted in his being sent to Calcutta by the late ruler of Mysore on the recommendation of his Private Secretary, a Scot of broad sympathies and understanding.

Born in humble circumstances, he did not conjure up any vision of greatness or wealth before his mind's eye inspite of his talents, but worked hard and assiduously for years, with such patience, preseverance and devotion, that to-day he stands out as a master-artist.

Venkatappa is a skilled craftsman with a supreme command over his technique. He is a



ವೀಣೆ ಶೇಷಣ್ಣ, ಒಂದು ಮೂರ್ತಿ ಶಿಲ್ಪ

Veena Seshanna, a bust

colourist of the first order (very often he makes his own colours in tempera) and his finish is perfect. His drawing is exceedingly fine, his colours rich, brilliant and pure. He is essentially a minature artist and that quality is to be seen in all his work.

His landscape studies of Ooty in different moods are a classic by themselves in that class of art. Though they are realistic works they transcend the formal truthfulness fo ordinary Western art and catch for eternity, in colour and lines, the fleeting beauty of nature's varying moods. You are nearer the "soul of things" when you see through these landscapes the very "spirit of nature". He has "the substance of things" which the French Master, Cezanne, tried so hard to reveal in his paintings.

An interesting story of an attempt to paint the Himalayas from Darjeeling by Venkatappa, Ganganendranath Tagore and Percy Brown may be told here. It seems these three artists spent one summer in Darjeeling and went out, day after day, to paint the magnificient view before them but failed to catch the delicate purple haze that usually hangs over the snowy peaks towards sunset time.

One night Venkatappa had a brain-wave and tried a little trick that worked, and when he showed the result to the other two they wondered how on earth he had succeeded in getting that effect I He told them the simple trick of dipping the picture in a purple solution, and they all had a good laugh over his ingenuity. And this picture, which was long considered lost, was traced by the artist and the present writer to the late Maharaja's office room at the Fern Hill Palace.Ootacamund.

Venkatappa's "Mrugatrushna" and "Bird Study" are, for instance, done after the best manner of the Moghul School and may well be compared with the best of Mansur's. The Rama and the Golden Deer" is a superb work of exceeding delicacy and great charm. It is a miniature in tempera and is wholly imaginary in conception and perfect in execution.

The Golden Deer (Maricha) is seen at a distance, with its reflection in a pool nearby tempting the guileless Sita, who is seen seated by Rama, whose puzzled looks forebode evil and show that the inevitable fate had already cast its gloom on his face. Sita's expression has a tender fear abot it ; she is depicted most faithfully as the ideal Hindu wife. The evil genious. Ravana, is hovering above the hut among the dark clouds, with a malicious grin and hopeful look. . All these suggestive expressions are very skillfully delineated in the best Rajput style. This picture is a gem of modern Indian art. His other "The Buddha with his Desciples" is another of his finest pictures ; all these except the "Bird" were in the Treasuryvala Collection.

